ಪ್ರ ಕಾ ಶ ಕ ರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯಮಾಲೆ
ಹು ಬ್ಬ ಳ್ಳಿ

ಮು ದ್ರ ಕ ರು :
ಎಸ್. ವ್ಹಿ. ಶ್ರೀಷ್ಠಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹು ಬ್ಬ ಳ್ಳಿ

ಮೊದಲನೇಯ ಆವೃತ್ತಿ
೧೫, ಫೆಬ್ರುವರಿ, ೧೯೫೩

ಬೆಲೆ : ೧—೮—೦

# ಲೇಖಕನ ಮಾತು

"ಹಸಿದ ಹಂಬಲ" ಎಂಬ ಈ ಕಾದಂಬರಿಯನ್ನು ನಮ್ಮ ಚಂದಾದಾರರ ಕೈಗರ್ಪಿಸಲು ನಮಗೆ ಸಂತೋಷವೆನಿಸುತ್ತದೆ. 'ಕೈ ಹಿಡಿದ ಕಾವೇರಿ' ಯನ್ನು ಕೊಡುವೆವೆಂದು ಪ್ರಕಟಿಸಿದ್ದೇವೇನೋ ನಿಜ. ಆದರೆ ಅದು ಇನ್ನೂ ಪೂರ್ಣವಾಗಿಲ್ಲ. ಅವಕ್ಕಾಗಿ ಕ್ಷಮಿಸಬೇಕೆಂದು ಪ್ರಾರ್ಥನೆ.

'ಹಸಿದ ಹಂಬಲ' ಕಾದಂಬರಿಗೆ ಜರ್ಮನಿಯ ಹೆರ್ಮನ್ ಹೆಸ್ಸೇರವರು ಬರೆದಿರುವ ಸಿದ್ಧಾರ್ಥನೆಂಬ ಕಥೆಯೇ ಮೂಲಾಧಾರವಾಗಿದೆ. ಸಿದ್ಧಾರ್ಥ ನೆಂದರೆ ಸಾಮಾನ್ಯವಾಗಿ ಗೌತಮ ಬುದ್ಧನೆಂದು ನಮ್ಮ ಜನರ ಭಾವನೆ. ಆದರೆ ಈ ಕಾದಂಬರಿಯ ನಾಯಕನಾದ ಸಿದ್ಧಾರ್ಥ, ಆ ಗೌತಮ ಬುದ್ಧ ನಲ್ಲ; ಬ್ರಾಹ್ಮಣನ ಮಗ. ಆದರೆ ಇದೂ ಆ ಗೌತಮನ ಕಾಲದ ಒಂದು ಮನೋಹರ ಕಥೆಯೇ ಆಗಿದೆ.

ಈ ಕಾದಂಬರಿ ಆಧ್ಯಾತ್ಮಿಕ ವಿಷಯ ವಿಚಾರಕ್ಕೆ ಸಂಬಂಧಿಸಿದೆ. ಗಹನವಾದುದನ್ನು ಆದಷ್ಟುಮಟ್ಟಿಗೆ ತಿಳಿಯಾಗಿ ಬರೆಯಲು ಯತ್ನಿಸಿದ್ದೇನೆ. ಕೀರ್ತಿ ಮೂಲ ಲೇಖಕರಿಗೆ ಸಲ್ಲಲಿ; ದೋಷ ದೋಷಗಳು ನನ್ನದೆಂದು ರಸಿಕರು ಕ್ಷಮಿಸಲಿ.

ಹುಬ್ಬಳ್ಳಿ — ಇತಿ

ಫೆಬ್ರುವರಿ ೧೯೫೩ — ಎಂ. ಹರಿದಾಸರಾಯ

# ಹಸಿದ ಹಂಬಲ

## ೧ ನೇಯ ಅಧ್ಯಾಯ

ನದಿಯ ದಂಡೆಯಲ್ಲಿರುವ ಒಂದು ಪರ್ಣಕುಟಿಯಲ್ಲಿ ಸಿದ್ಧಾರ್ಥನು ಹುಟ್ಟಿ ಬೆಳೆದ. ಯಜ್ಞಯಾಗ, ತೀರ್ಥಸ್ನಾನ ಹಾಗೂ ಗಾಳಿ ಮಳೆ ಬಿಸಿಲು ಗಳಿಗೆ ಅವನ ಸುಕುಮಾರ ಶರೀರವು ಕಪಿಶ ಬಣ್ಣ ತಾಳಿದೆ. ಮಾವಿನ ತೋಪಿನಲ್ಲಿ ಆಟವಾಡಿದಾಗ, ತಾಯಿಯು ಸುಸ್ವರದಿಂದ ಹಾಡಿದಾಗ, ತಂದೆ ವಿದ್ಯಾಭ್ಯಾಸ ಮಾಡಿಸಿದಾಗ, ವಿದ್ವಾಂಸರೊಡನಿದ್ದಾಗ, ನಾನಾ ಕನಸು ಗಳು ಅವನ ಕಣ್ಣಮುಂದೆ ಕಟ್ಟುತ್ತಿದ್ದವು. ಸಿದ್ಧಾರ್ಥ ಪಂಡಿತರೊಡನೆ ಸಂಭಾಷಣೆ ನಡೆಸಲಾರಂಭಿಸಿ ಬಹಳ ಕಾಲವೂ ಆಗಿದೆ. ತನ್ನ ಮಿತ್ರನಾದ ಗೋವಿಂದನೊಡನೆ ಚರ್ಚೆ ಕೂಡಾ ನಡೆಸಿದ್ದ. ಅವನೊಡನೆ ತಾನೂ ಧ್ಯಾನ ಮತ್ತು ಯೋಗಾಭ್ಯಾಸಗಳನ್ನು ಮಾಡಿರುವನು. ಮೌನವಾಗಿ, ಉಸಿರಿನೊಂದಿಗೆ ಓಂಕಾರವನ್ನು ಉಚ್ಚರಿಸಲೂ ಅರಿತಿದ್ದ. ಆಗ ಅಧ್ಯಾತ್ಮ ಜೀವಿಯಂತೆ ಅವನ ಮೋರೆಯು ತೇಜಃಪುಂಜವಾಗುತಿತ್ತು. ಅವಿನಾಶಿ ಸರ್ವಾಂತರ್ಯಾಮಿ ಹಾಗೂ ದೇಹದಲ್ಲಿ ಗೂಢವಾಗಿ ಹುದುಗಿಕೊಂಡಿರುವ ಆತ್ಮವನ್ನು ಅರಿಯಲು ಬಲ್ಲವನಾಗಿದ್ದ.

ಮಗನು ಬುದ್ಧಿವಂತ; ಜ್ಞಾನದಾಹವುಳ್ಳವನು; ಆದುದರಿಂದ ತಂದೆಯ ಸಂತೋಷಕ್ಕೆ ಪಾರವಿರಲಿಲ್ಲ. ಅವನು ದೊಡ್ಡವನಾದಾಗ ಘನ ವಿದ್ವಾಂಸ ನೂ, ಆಚಾರ್ಯನೂ, ಬ್ರಾಹ್ಮಣಶ್ರೇಷ್ಠನೂ ಆಗಬಹುದೆಂದು ಊಹಿಸಿದ್ದ. ಅವನ ನಡೆ ನುಡಿ ಹಾಗೂ ಅವನ ಸುದೃಢ, ಸುಂದರ, ಸುಕೋಮಲ ಜೀವ ವನ್ನು ಕಂಡು ತಾಯಿ ಕೂಡಾ ಹೆಮ್ಮೆಪಡುತಿದ್ದಳು. ಈ ಪೆರೆನೊಸಲಿನ, ತೆಳು ಶರೀರದ ಸಿದ್ಧಾರ್ಥ, ರಾಜ ಠೀವಿಯಿಂದ ನಗರದ ರಸ್ತೆಗಳಲ್ಲಿ ಸಂಚರಿ ಸಿದಾಗ ಬ್ರಾಹ್ಮಣ ಕನ್ಯೆಯರೆದೆಗಳಲ್ಲಿ ಪ್ರೇಮ ಅಂಕುರಿಸುತಿತ್ತು.

ಅವನ ಮಿತ್ರನೂ ಬ್ರಾಹ್ಮಣ ಪುತ್ರನೂ ಆದ ಗೋವಿಂದನಿಗೆ ಅವನ

ಮೇಲೆ ಎಲ್ಲರಿಗಿಂತಲೂ ಹೆಚ್ಚು ಪ್ರೀತಿ. ಜ್ಯೋತಿಯಂತೆ ಬೆಳಗುತ್ತಿದ್ದ ಸಿದ್ಧಾರ್ಥನ ಕಣ್ಣುಗಳನ್ನು ಕಾಣುವುದೊಂದು ಸೌಭಾಗ್ಯ. ಅವನ ಮೃದುಮಧುರ ಭಾವ ವಾಣಿಯನ್ನು ಕೇಳಲು ಗೋವಿಂದನಿಗೆ ಇಷ್ಟ. ಸಿದ್ಧಾರ್ಥನ ನಡಿಗೆಯ ರೀತಿ, ಹಾವ ಭಾವಗಳೂ ಗೋವಿಂದನಿಗೆ ಬಹಳ ಪ್ರಿಯವಾಗಿದ್ದವು. ಸಿದ್ಧಾರ್ಥನ ನಡೆನುಡಿಗಳೆಲ್ಲವೂ ಅವನಿಗೆ ಚಂದವೇ. ಇವೆಲ್ಲವುಗಳಿಗಿಂತಲೂ ಸಿದ್ಧಾರ್ಥನ ಬುದ್ಧಿಶಕ್ತಿ, ತೀಕ್ಷ್ಣ ವಿಚಾರ, ಮನೋಬಲ, ಉದ್ಯೋಗಶೀಲಗಳೆಂದರೆ ಅಧಿಕ ಪ್ರೇಮ. ಅವನು ಎಲ್ಲರಂತೆ ಸಾಮಾನ್ಯ ಬ್ರಾಹ್ಮಣನಾಗಲಾರ. ಯಾಂತ್ರಿಕವಾಗಿ ಯಜ್ಞಯಾಗಗಳನ್ನು ಮಾಡುವ ಅಲಸಿ, ಗಿಳಿಪಾಠವನ್ನುಚ್ಚರಿಸುವ ಲೋಭಿ, ಅಹಂಕಾರಿಯಾದ ನಿರುಪಯೋಗಿ ವಾಗ್ಮಿ, ದುಷ್ಟಬುದ್ಧಿಯ ಕಪಟಿ ಪುರೋಹಿತ ಅಥವಾ, ಮಂದೆಯಲ್ಲೊಂದು ಬದುಕುವ ಮಂದಮತಿಯ ಒಳ್ಳೇ ಕುರಿಯಾಗಿ ಸಿದ್ಧಾರ್ಥ ಬಾಳಲಾರ! ಇಲ್ಲ. ಗೋವಿಂದನಿಗೂ ಹಾಗಾಗಲು ಇಷ್ಟವಿಲ್ಲ. ಜೀವದ ಗೆಳೆಯನೂ ಮಹಾನುಭಾವನೂ ಆದ ಸಿದ್ಧಾರ್ಥನನ್ನು ಅನುಸರಿಸಲು ಅವನ ಆಶೆ. ಒಂದು ವೇಳೆ ಅವನಿಗೆ ದೈವೀ ಸಾಕ್ಷಾತ್ಕಾರವಾದರೆ ಹಾಗೂ ಅವನು ಬೆಳಕನ್ನು ಕಂಡರೆ ಆಗ ಅವನ ಪರಮ ಮಿತ್ರನಾಗಿ, ಅವನ ಸಂಗಾತಿಯಾಗಿ, ಅವನ ಭೃತ್ಯನಾಗಿ, ಅವನ ಛಲ್ಲಿಯವನಾಗಿ, ಅವನ ನೆರಳಾಗಿ ಅನುಸರಿಸಲು ಗೋವಿಂದನ ಹೆಬ್ಬಯಕೆ.

ಈ ರೀತಿ ಎಲ್ಲರಿಗೂ ಸಿದ್ಧಾರ್ಥನ ಮೇಲೆ ಪ್ರೀತಿ. ಅವರನ್ನು ಕಂಡು ಅವನಿಗೂ ಹರುಷ. ಪ್ರತಿಯೊಬ್ಬರನ್ನೂ ಅವನು ಸಂತೋಷಪಡಿಸುತ್ತಿದ್ದ.

ಆದರೆ ಸ್ವತಃ ಸಿದ್ಧಾರ್ಥನಿಗೆ ಸುಖವಿಲ್ಲ. ಅಂಜೂರದ ತೋಟದಲ್ಲಿರುವ ಸುಂದರ ಕಿರುದಾರಿಗಳಲ್ಲಿ ಅಲೆದಾಗ, ಉಪವನದ ನೀಲ ನೆರಳಲ್ಲಿ ಕುಳಿತು ಧ್ಯಾನಾಸಕ್ತನಾದಾಗ, ದಿನಂಪ್ರತಿ ತೀರ್ಥಸ್ನಾನ ಮಾಡಿದಾಗ, ಮಾವಿನ ತೋಪಿನ ನೆರಳಲ್ಲಿ ಯಜ್ಞ ನಡೆದಾಗ, ಅವನ ಹಾವಭಾವಗಳಲ್ಲಿ ವ್ಯತ್ಯಾಸ ತೋರದಿದ್ದರೂ ಅವನು ಸರ್ವರ ಪ್ರೀತಿಗೆ ಪಾತ್ರನಾಗಿದ್ದರೂ ಎಲ್ಲರ ಕಣ್ಮನಗಳಿಗೆ ಪ್ರಿಯಕರನಾಗಿದ್ದರೂ ಅವನ ಹೃದಯದಲ್ಲಿ ಆನಂದವಿರಲಿಲ್ಲ. ಹರಿವ ನದಿಯಿಂದ, ರಾತ್ರಿ ಮಿನುಗುವ ತಾರೆಗಳಿಂದ, ಸೂರ್ಯನ ಉರಿ ಕಿರಣಗಳಿಂದ, ಕನಸುಗಳೂ ತಳಮಳಿಸುವ ವಿಚಾರಗಳೂ ಹರಿದು

ಬಂದುವು. ಯಜ್ಞಕುಂಡದ ಹೊಗೆಯಿಂದ ಎದ್ದಿತೋ, ಋಗ್ವೇದ ಶ್ಲೋಕ ದಿಂದ ಜನಿಸಿತೋ, ವಯೋವೃದ್ಧ ಬ್ರಾಹ್ಮಣರ ಬೋಧೆಯಿಂದ ಸೋರಿತೋ ಏನೋ, ಸಿದ್ಧಾರ್ಥನಲ್ಲಿ ಆತ್ಮದ ಅಶಾಂತಿ ಎದ್ದಿತು.

ಸಿದ್ಧಾರ್ಥನ ಮನೋಭೂಮಿಯಲ್ಲಿ ಅಸಮಾಧಾನದ ಬೀಜ ಬಿದ್ದಿದೆ. ತಾಯಿ ತಂದೆ ತೋರುವ ಮೋಹ, ಗೋವಿಂದನ ಮಿತ್ರ ಪ್ರೇಮ, ಇವು ಸದಾಗಾಲವೂ ಅವನಿಗೆ ಸುಖಗೊಡಲಾರವು; ಆದರಿಂದ ಶಾಂತಿ ದೊರಕದು. ತೃಪ್ತಿ ದೊರೆಯದು ಮತ್ತು ಅವು ಸಾಕಾಗಲಾರವು. ಸಜ್ಜನನಾದ ಅವನ ತಂದೆ, ಅವನ ಇನ್ನಿತರ ಗುರುಗಳು, ಪ್ರಾಜ್ಞರಾದ ಬ್ರಾಹ್ಮಣರು ಈಗಾಗಲೇ ತಾವರಿತಿದ್ದ ಮುಖ್ಯ ಮತ್ತು ಶ್ರೇಷ್ಠ ಜ್ಞಾನವನ್ನು ದಾನ ಮಾಡಿರುವರು. ತಾವರಿತಿದ್ದ ವಿದ್ಯೆಯ ಸಾರ ಸರ್ವಸ್ವವನ್ನೂ ಅವನ ಜೀವ ಪಾತ್ರೆಗೆ ಎರೆದಿ ರುವರು. ಆದರೂ ಆ ಪಾತ್ರೆ ತುಂಬಿಲ್ಲ; ಅವನ ಬುದ್ಧಿಗೆ ತೃಪ್ತಿ ದೊರೆತಿಲ್ಲ; ಅವನ ಆತ್ಮಕ್ಕೆ ಶಾಂತಿಯಿಲ್ಲ; ಅವನ ಹೃದಯ ಶಾಂತವಾಗಿಲ್ಲ. ತೀರ್ಥ ಸ್ನಾನ ಒಳ್ಳೇದೇ. ಆದರೆ ಅದು ಬರಿನೀರು ಅದರಿಂದ ಪಾಪವೇನು ತೊಳೆದು ಹೋಗುವುದಿಲ್ಲ; ಹೃದಯದ ದುಃಖ ಪರಿಹಾರವಾಗುವುದಿಲ್ಲ. ಯಜ್ಞ ಯಾಗಗಳು ಮತ್ತು ದೇವತಾಪ್ರಾರ್ಥನೆಗಳು ಉತ್ತಮ. ಇಷ್ಟರಿಂದಲೇ ಮುಗಿಯಿತೇ? ಯಜ್ಞಗಳಿಂದ ಆನಂದ ದೊರಕಿತೇ? ದೇವತೆಗಳೆಂದರೆ ಯಾರು? ನಿಜವಾಗಿಯೂ ಪ್ರಜಾಪತಿಯು ಈ ಸೃಷ್ಟಿಯ ಕಾರಣಕರ್ತನೇ? ಆತ್ಮವಲ್ಲವೇ? ಅವನೇ ಅಲ್ಲವೇ ಅದರ ನಿರ್ಮಾಣ ಪುರುಷ? ನಮ್ಮ ನಿಮ್ಮಂತೆ ದೇವತೆಗಳು ಮರ್ತ್ಯರೂ ಅಸ್ಥಿರರೂ ಆಗಿರಲಿಕ್ಕಿಲ್ಲವೇ? ಹಾಗಿದ್ದರೆ ದೇವತೆಗ ಳಿಗೆ ಯಜ್ಞದಲ್ಲಿ ಬಲಿಕೊಡುವುದು ಯೋಗ್ಯವೇ? ಸರಿಯೇ? ವಿವೇಕವೇ? ಅವನಿಗೆ, ಆ ಆತ್ಮನಿಗೆ, ಅವನೊಬ್ಬನಿಗೆ ಮಾತ್ರ ಅಲ್ಲದೆ, ಇನ್ನಾರಿಗೆ ಯಾಗ ಯಜ್ಞಗಳನ್ನು ಮಾಡಬೇಕು? ತನ್ನೊಳಗೆ, ತನ್ನ ದೇಹದ ಒಳಗೊಳಗೆ ಅಲ್ಲದೆ, ಇನ್ನೆಲ್ಲಿ ಆತ್ಮನನ್ನು ಶೋಧಿಸಬಹುದು? ಇನ್ನಾವ ಬೇರೆ ವಾಸಸ್ಥಳ ವಿದೆ ಅವನಿಗೆ? ಇನ್ನೆಲ್ಲಿ ಅವನ ಶಾಶ್ವತ ಸ್ವರೂಪವನ್ನು ಕಾಣಲು ಸಾಧ್ಯ? ಅದು ಮಾಂಸವಲ್ಲ. ಎಲುಬಲ್ಲ. ಅದು ವಿಚಾರವಲ್ಲ. ಸ್ವಪ್ರಜ್ಞತೆಯಲ್ಲ. ಜ್ಞಾನಿಗಳು ಬೋಧಿಸಿದುದು ಅದನ್ನೇ. ಹಾಗಿದ್ದರೆ ಅದು ಎಲ್ಲಿದೆ?

ಆತ್ಮಜ್ಞಾನ ಹಾಗೂ ಆತ್ಮಶೋಧನೆಯ ಇನ್ನಾವ ಯೋಗ್ಯ ಉಪಾ

ಯವಾದರೂ ಇದೆಯೇ? ಯಾರೂ ಆ ದಾರಿ ತೋರಲಿಲ್ಲ. ಅದು ಯಾರಿಗೂ ತಿಳಿದಿಲ್ಲ. ತಂದೆ, ಗುರುಗಳು, ಜ್ಞಾನಿಗಳು ಹಾಗೂ ಪವಿತ್ರ ಶ್ಲೋಕಗಳಿಂದಲೂ ತಿಳಿಯಲಿಲ್ಲ. ಬ್ರಾಹ್ಮಣರು ಸರ್ವಜ್ಞರು. ಅವರ ಪವಿತ್ರ ಗ್ರಂಥಗಳಲ್ಲಿ ಸರ್ವವೂ ಅಡಕವಾಗಿವೆ. ಸೃಷ್ಟಿಯ ಸೃಷ್ಟಿ, ಮಾತಿನ ಹುಟ್ಟು, ಆಹಾರ, ಯೋಗ, ಪಂಚೇಂದ್ರಿಯಗಳ ಕ್ರಿಯೆ, ದೇವತಾಕರ್ಮ ಇತ್ಯಾದಿ, ಎಲ್ಲವುಗಳ ಶೋಧನೆ ಮಾಡಿರುವರು. ಅವರು ಅನೇಕ ವಿಷಯಗಳನ್ನು ಅರಿತಿದ್ದರು. ಆದರೆ ಮಹತ್ವದ ಒಂದು ವಿಷಯವನ್ನು, ಅದೊಂದೇ ವಿಷಯವನ್ನು, ತಿಳಿಯದೇ ಇದ್ದರೆ ಉಳಿದ ವಿಷಯಗಳನ್ನು ಅರಿತುಕೊಳ್ಳುವುದರಲ್ಲಿ ಅರ್ಥವಿದೆಯೇ?

ಪವಿತ್ರಗ್ರಂಥಗಳ ಅನೇಕ ಚರಣಗಳಲ್ಲಿ, ಸಾಮವೇದದ ಉಪನಿಷತ್ತುಗಳಲ್ಲಿ ಈ ರಹಸ್ಯದ ಉಲ್ಲೇಖವಿದೆ. "ನಿನ್ನ ಆತ್ಮವೇ ಸಂಪೂರ್ಣವಾದ ಲೋಕ" ಎಂದು ಬರೆಯಲಾಗಿದೆ. ಮನುಷ್ಯನು ನಿದ್ದೆ ಹೋದಾಗ ಅವನು ಆತ್ಮದಲ್ಲಿ ಲೀನ ಹೊಂದುತ್ತಾನೆಂದು ಹೇಳಿದೆ. ಈ ಕವಿತೆಗಳಲ್ಲಿ ಆಶ್ಚರ್ಯಕರವಾದ ಜ್ಞಾನ ಹುದುಗಿದೆ. ತುಂಬಿಗಳು ಶುದ್ಧವಾದ ಮಧುವನ್ನು ಸಂಗ್ರಹಿಸಿದಂತೆ ಋಷಿಗಳ ಜ್ಞಾನವನ್ನೆಲ್ಲ ಮನೋಹರವಾದ ಭಾಷೆಯಲ್ಲಿ ಹೇಳಿರುವರು. ಬುದ್ಧಿವಂತರಾದ ಬ್ರಾಹ್ಮಣರು ತಲೆ ತಲಾಂತರದಿಂದ ಸಂಗ್ರಹಿಸಿ ಕಾಪಾಡಿಕೊಂಡು ಬಂದ ಈ ಅಸಾಧಾರಣ ಜ್ಞಾನವನ್ನು ಅಲಕ್ಷಿಸಲಾಗದು ಆದರೆ ಈ ಜ್ಞಾನಾಮೃತವನ್ನು ಗಳಿಸಿದ ಬ್ರಾಹ್ಮಣರೂ ಗುರುಗಳೂ ಜ್ಞಾನಿಗಳೂ ಈಗೆಲ್ಲಿದ್ದಾರೆ?

ನಿದ್ರಾವಸ್ಥೆಯಲ್ಲಿದ್ದಾಗ ಕೂಡಾ ಆತ್ಮದ ಸಾಕ್ಷಾತ್ಕಾರ ಗಳಿಸಿ ಆ ಮೇಲೆ ಜಾಗ್ರತಾವಸ್ಥೆಯಲ್ಲೂ ಜೀವನದಲ್ಲೂ ಮಾತು ಕೃತಿಗಳಲ್ಲೂ ಅದನ್ನು ಭದ್ರವಾಗಿ ಹಿಡಿದುಕೊಂಡ ಆ ದೀಕ್ಷಾಬದ್ಧರು ಎಲ್ಲಿದ್ದಾರೆ? ಅನೇಕ ಬ್ರಾಹ್ಮಣರನ್ನು ಸಿದ್ಧಾರ್ಥ ಬಲ್ಲ. ಅವರೆಲ್ಲರಿಗಿಂತಲೂ ಅವನ ತಂದೆಯೊಡನೆ ಹೆಚ್ಚಿನ ನಿಕಟ ಸಂಬಂಧವಿದೆ. ತಂದೆ ಶುದ್ಧ ಜೀವಿ; ವಿದ್ವಾಂಸ; ಎಲ್ಲರ ಮಾನ ಮನ್ನಣೆಗೆ ಪಾತ್ರನು: ಶಾಂತ ಮೂರ್ತಿ; ಕುಲೀನನು. ಅವನದು ಸದಾಚಾರದ ಜೀವನ. ಅವನ ವಾಣಿಯಲ್ಲಿ ಪಾಂಡಿತ್ಯವಿದೆ. ಯಾವಾಗಲೂ ಸದ್ಭಾವನೆಯಿಂದಲೇ ಪ್ರೇರಿತನಾದವನು. ಆದರೆ ಅಷ್ಟು ಜ್ಞಾನಿಯಾದವನಿಗೆ

ಕೂಡಾ ಆನಂದವಿದೆಯೇ? ಅವನ ಜೀವಕ್ಕೆ ಶಾಂತಿಯಿದೆಯೇ? ಅವನು ಕೂಡಾ ಅತೃಪ್ತಿಯಿಂದಿರುವ ಶೋಧಕನಲ್ಲವೇ? ಯಾವಾಗಲೂ ಅವನು ಈ ತೃಷೆಯಿಂದ ತೀರ್ಥಸ್ನಾನಕ್ಕಾಗಿ ಕ್ಷೇತ್ರಗಳ ಸಂದರ್ಶನ, ಯಾಗ ಯಜ್ಞಗಳ ಯಜನ ಯಾಜನ, ಪವಿತ್ರ ಗ್ರಂಥಗಳ ಪಠನ, ಬ್ರಾಹ್ಮಣರ ಸಂಭಾಷಣ ಗೋಷ್ಠಿಗಳಲ್ಲಿ ಮಗ್ನನಾಗಿಲ್ಲವೇ? ಯಾವ ಪಾಪಕೃತ್ಯವಿಲ್ಲದವನಾದ ಅವನೂ ಪಾಪಮುಕ್ತನಾಗಲು ಹಾಗೂ ದಿನಂಪ್ರತಿ ಪಾಪ ತೊಳೆದುಕೊಳ್ಳಲು ಯತ್ನಿಸುತ್ತಿರುವುದಾದರೂ ಏತಕ್ಕೆ? ಆತ್ಮವು ಅವನ ದೇಹಸ್ವಾಮಿಯಾಗಿಲ್ಲವೇ? ಆದುದರಿಂದ ಅವನ ಹೃದಯದಲ್ಲೇ ಈ ರಹಸ್ಯಮೂಲ ಉಂಟಲ್ಲವೇ? ತನ್ನೊಳಗೆ ತಾನೇ ಈ ಮೂಲವನ್ನು ಹುಡುಕಬೇಕು ಹಾಗೂ ಸ್ವಾಧೀನ ಮಾಡಿಕೊಳ್ಳಬೇಕು. ಉಳಿದದ್ದೆಲ್ಲ ಬರೀ ಶೋಧನೆ-ಸುತ್ತುದಾರಿ, ತಪ್ಪು.

ಸಿದ್ಧಾರ್ಥನ ತಲೆಯಲ್ಲಿ ಈ ವಿಚಾರಗಳು ಸುಳಿಯುತ್ತಿವೆ. ಇದು ಅವನ ತೃಷೆ. ಇದೇ ಅವನ ಚಿಂತೆ.

ಆಗಾಗ ಅವನು "ಸತ್ಯವೇ ಬ್ರಹ್ಮ. ಇದನ್ನರಿತವನು ದಿನ ದಿನವೂ ಸ್ವರ್ಗಲೋಕಕ್ಕೆ ತೆರಳುತ್ತಾನೆ" ಎಂಬ ಉಪನಿಷದ್ ವಾಕ್ಯವನ್ನು ಪಠಿಸುತಿದ್ದ. ಅದು ಆ ಸ್ವರ್ಗಲೋಕ ಬಹಳ ಹತ್ತಿರ ಇದ್ದಂತೆ ಅವನಿಗೆ ಭಾಸವಾಗುತಿತ್ತು. ಆದರೆ ಅವನು ಅದನ್ನು ಎಂದೂ ಮುಟ್ಟಿಲ್ಲ. ಅವನ ದಾಹ ಎಂದೂ ಇಂಗಿಲ್ಲ. ಅವನಿಗೆ ಗೊತ್ತಿದ್ದ ಮತ್ತು ಅವನಿಗೆ ಉಪದೇಶ ಮಾಡಿದ ಯಾವ ವಿದ್ವಾಂಸನಿಗೂ ಅದು ನಿಲುಕಿದಂತೆ ಕಾಣಲಿಲ್ಲ. ಎಂದೆಂದೂ ಇರುವ ಈ ಬಾಯಾರಿಕೆಯನ್ನು ಇಂಗಿಸಿಕೊಂಡವರು ಒಬ್ಬರೂ ಇಲ್ಲ.

ಒಂದು ದಿನ ಸಿದ್ಧಾರ್ಥನು ತನ್ನ ಮಿತ್ರನನ್ನು ಕರೆದು ಕೇಳಿದ: "ಗೋವಿಂದಾ, ನನ್ನೊಂದಿಗೆ ಆ ವಟವೃಕ್ಷದ ಕಡೆಗೆ ಬಾ. ನಾವು ಧ್ಯಾನಾಭ್ಯಾಸ ಮಾಡೋಣ."

ಇಬ್ಬರೂ ಆ ಆಲದ ಮರದ ಕಡೆ ತೆರಳಿದರು. ಒಬ್ಬರಿಗೊಬ್ಬರು ಇಪ್ಪತ್ತು ಹೆಜ್ಜೆಗಳ ಅಂತರದಲ್ಲಿ ಕುಳಿತರು. ಓಂಕಾರ ಉಚ್ಚರಿಸಿ ಕುಳಿತುಕೊಳ್ಳುವ ಮೊದಲು ಸಿದ್ಧಾರ್ಥನು ತನ್ನ ಸುಶ್ರಾವ್ಯವಾದ ದನಿಯಿಂದ "ಓಂಕಾರವೇ ಬಿಲ್ಲು. ಆತ್ಮವೇ ಬಾಣ. ಬ್ರಹ್ಮವೇ ಬಾಣದ ಗುರಿ. ನಿರ್ಭಯದಿಂದ ಆ ಗುರಿ ಹಿಡಿ" ಎಂಬ ಅರ್ಥವುಳ್ಳ ಶ್ಲೋಕವನ್ನು ಹಾಡಿದ.

ಯೋಗಾಭ್ಯಾಸದ ನಿಯಮಿತ ಅವಧಿಯು ಕಳೆದ ಕೂಡಲೇ ಗೋವಿಂದನು ಎದ್ದ. ಆಗ ಸಂಜೆಯೂ ಆಗಿತ್ತು. ಸಂಧ್ಯಾವಂದನೆಯ ಕಾಲ. ಸಿದ್ಧಾರ್ಥನ ಹೆಸರು ಹೇಳಿ ಕರೆದ. ಆದರೆ ಅವನು ಅದಕ್ಕೆ ಉತ್ತರ ಕೊಡಲಿಲ್ಲ. ಸಿದ್ಧಾರ್ಥ ತನ್ಮಯನಾಗಿದ್ದ. ಅವನ ಕಣ್ಣುಗಳು ಯಾವುದೋ ಒಂದು ದೂರದ ಗುರಿಯನ್ನು ನೋಡುತಿದ್ದಂತೆ ತೋರುತಿತ್ತು. ಹಲ್ಲುಗಳೆಡೆ ನಾಲಿಗೆಯ ತುದಿ ಕಾಣಿಸುತಿತ್ತು. ಅವನು ಶ್ವಾಸೋಚ್ಛ್ವಾಸ ಮಾಡುತ್ತಿದ್ದಂತೆಯೇ ಇರಲಿಲ್ಲ. ಅವನು ಧ್ಯಾನಮಗ್ನನಾಗಿದ್ದ.

ಒಮ್ಮೆ ಕೆಲವು ಸನ್ಯಾಸಿಗಳು ಸಿದ್ಧಾರ್ಥನ ನಗರವನ್ನು ಹಾದು ಹೋದರು. ಅವರು ಅಲೆವ ವಿರಕ್ತರು. ಮೂವರೂ ಜರ್ಜರಿತ ದೇಹಧಾರಿಗಳು. ಅಷ್ಟು ಮುದುಕರೂ ಅಲ್ಲ. ಅಷ್ಟು ಯುವಕರೂ ಅಲ್ಲ. ಅವರ ಕೈ ಮೈಗಳಲ್ಲೆಲ್ಲ ಧೂಳು. ಬಟ್ಟೆ ಬರೆಯೂ ಬಹಳವಿಲ್ಲದೆ ನಗ್ನರಂತಿದ್ದರು. ಬಿಸಿಲಿಗೆ ದೇಹದ ಚರ್ಮವೂ ಕಮರಿದೆ ಏಕಾಂತಪ್ರಿಯರು. ವಿಲಕ್ಷಣ ಜೀವಿಗಳು. ಜಗತ್ತಿನ ಬಗ್ಗೆ ಅವರಿಗೆ ತ್ವೇಷ. ಮನುಷ್ಯ ಲೋಕದಲ್ಲಿ ಅವರು ಕೃಶ ತೋಳಗಳು. ಷಡ್ವೈರಿಗಳನ್ನು ಹತೋಟಿಯಲ್ಲಿಟ್ಟುಕೊಂಡ, ಅದ್ಭುತ ಸೇವೆಗೈದ ಹಾಗೂ ಸಂಪೂರ್ಣ ಆತ್ಮಸಂಯಮನ ಮಾಡಿದವರಂತೆ ಕಾಣುತಿದ್ದರು.

ಸಂಜೆ ಅನುಧ್ಯಾನ ಮುಗಿದ ಬಳಿಕ ಸಿದ್ಧಾರ್ಥನು ಗೋವಿಂದನೊಡನೆ ಹೇಳಿದ: "ಮಿತ್ರಾ, ನಾಳೆ ಮುಂಜಾನೆ ಸಿದ್ಧಾರ್ಥನು ಸನ್ಯಾಸಿಗಳೊಡನೆ ಸೇರಿಕೊಳ್ಳುತ್ತಾನೆ. ಅವನು ಸನ್ಯಾಸಿಯಾಗುತ್ತಾನೆ."

ಈ ಮಾತುಗಳನ್ನು ಕೇಳಿ ಗೋವಿಂದನು ಗಾಬರಿಯಾದ. ಸಿದ್ಧಾರ್ಥನ ಮೋರೆ ನೋಡಿ ಅವನ ಮನೋನಿರ್ಧಾರವನ್ನು ಓದಿದ. ಅವನ ಜೀವನದಲ್ಲಿ ಬದಲಾವಣೆ ಈಗ ಆರಂಭವಾಯಿತೆಂದೂ ಅರಿತ. ಸಿದ್ಧಾರ್ಥ ಸ್ವಂತ ದಾರಿ ಆರಿಸಿಕೊಂಡಿದ್ದಾನೆ. ಅವನ ಅದೃಷ್ಟವು ಈಗ ತಾನೇ ರೂಪ ತಾಳ ತೊಡಗಿದೆ. ಅವನ ಅದೃಷ್ಟದೊಂದಿಗೆ ತನ್ನ ಭವಿಷ್ಯವೂ ಸಮರಸವಾಗಿದೆ. ಒಣಗಿದ ಬಾಳೆಹಣ್ಣಿನ ಸಿಪ್ಪೆಯಂತೆ ಗೋವಿಂದನು ನಿಸ್ತೇಜನಾದ.

ಗೋವಿಂದ ಕೇಳಿದ: "ಸಿದ್ಧಾರ್ಥ, ಇದಕ್ಕೆ ನಿನ್ನ ತಂದೆ ಒಪ್ಪಿಯಾನೇ?"

ಆಗ ಸಿದ್ಧಾರ್ಥನು, ಈಗ ತಾನೇ ನಿದ್ದೆಯಿಂದ ಎದ್ದವನಂತೆ ತನ್ನ

ಮಿತ್ರನ ಕಡೆ ನೋಡಿದ. ಗೋವಿಂದನ ಆತ್ಮಗತ, ಅವನ ಚಿಂತೆ ಮತ್ತು ವೈರಾಗ್ಯಗಳು ಮಿಂಚಿನಂತೆ ಅವನಿಗೆ ಹೊಳೆದುವು.

ಆ ಮೇಲೆ ಮೆಲುದನಿಯಲ್ಲೇ ಹೇಳಿದ: "ಗೋವಿಂದಾ, ನಾವು ಹೆಚ್ಚು ಮಾತಾಡಿ ಪ್ರಯೋಜನವಿಲ್ಲ. ನಾಳೆ ಸೂರ್ಯೋದಯ ಕಾಲಕ್ಕೆ ನಾನು ಸನ್ಯಾಸಿಯ ಜೀವನವನ್ನು ಆರಂಭಿಸುತ್ತೇನೆ. ಇದರ ಬಗ್ಗೆ ನಾವು ಪುನಃ ಚರ್ಚಿಸುವುದು ಬೇಡ."

ಹುಲ್ಲಿನ ಚಾಪೆಯ ಮೇಲೆ ಕುಳಿತಿದ್ದ ತನ್ನ ತಂದೆಯ ಕೋಣೆಗೆ ಸಿದ್ಧಾರ್ಥ ತೆರಳಿದ. ತಂದೆಯ ಹಿಂಬದಿ ಹೋಗಿ ನಿಂತುಕೊಂಡ. ಆತನಿಗೆ ಮಗನ ಸಾನ್ನಿಧ್ಯ ಗೊತ್ತಾಗುವ ವರೆಗೂ ನಿಂತುಕೊಂಡ.

"ಯಾರದು ಸಿದ್ಧಾರ್ಥನೇನು ?'' ತಂದೆ ಕೇಳಿದ.

"ಹೌದು"

"ಏನು? ಹೇಳು"

"ನಾಳೆ ನಾನು ಈ ಮನೆಯನ್ನು ತೊರೆದು ಹೋಗಲು ಬಯಸುತ್ತೇನೆಂದು ಹೇಳಲು ಬಂದೆ. ತಂದೇ, ಸನ್ಯಾಸಿಯಾಗಲು ನನ್ನ ಆಶೆ. ನೀನು ಇದಕ್ಕೆ ಆಕ್ಷೇಪಿಸುವದಿಲ್ಲವೆಂದು ನನ್ನ ನಂಬಿಗೆ".

ಆ ಬ್ರಾಹ್ಮಣ ನಿರುತ್ತರನಾದ. ಆಕಾಶದಲ್ಲಿ ತಾರೆಗಳು ಮೂಡಿದುವು. ಅವು ಗತಿಯನ್ನು ಬದಲಾಯಿಸಿದುದೂ ಕೋಣೆಯ ಕಿಟಕಿಯಿಂದ ಕಂಡು ಬಂದಿತು. ಅವನ ಮಗ ಕೈಕಟ್ಟಿಕೊಂಡು ಮೌನವಾಗಿ, ಅಲುಗದೆ, ಅಲ್ಲೇ ನಿಂತಿದ್ದ. ಮೌನವಾಗಿದ್ದ ತಂದೆ ಕೂಡಾ ಚಾಪೆಯಿಂದ ಕದಲಿರಲಿಲ್ಲ. ಕೊನೆಗೆ ಅವನ ತಂದೆ ನುಡಿದ: "ಬ್ರಾಹ್ಮಣರು ಕೆಟ್ಟ ಮತ್ತು ಸಿಟ್ಟಿನ ಮಾತುಗಳನ್ನಾಡುವುದು ಸರಿಯಲ್ಲ. ಆದರೆ ನನಗೆ ದುಃಖವಾಗುತ್ತದೆ. ಇನ್ನೊಮ್ಮೆ ಈ ರೀತಿ ನೀನು ಬಿನ್ನವಿಸಿಕೊಳ್ಳಬೇಡ".

ಬ್ರಾಹ್ಮಣ ಮೆಲ್ಲಗೆದ್ದ. ಸಿದ್ಧಾರ್ಥ ಕೈಕಟ್ಟಿಕೊಂಡು ಮೌನವಾಗಿಯೇ ನಿಂತ.

"ಇನ್ನೂ ಯಾಕೆ ನಿಂತೆ?" ಎಂದು ತಂದೆ ಪ್ರಶ್ನಿಸಿದ.

"ನಿನಗೆ ಗೊತ್ತಿದೆಯಲ್ಲ."

ಅವನ ತಂದೆ ಬೇಸರದಿಂದ ಕೋಣೆಯಿಂದ ಹೊರಬಿದ್ದ ಮತ್ತು ತನ್ನ

ಹಾಸಿಗೆಯಲ್ಲಿ ಮಲಗಿಕೊಂಡ.

ಒಂದು ಗಂಟೆ ಕಳೆಯಿತು. ಅವನಿಗೆ ನಿದ್ದೆಯೇನೂ ಬರಲಿಲ್ಲ. ಹಾಸಿಗೆಯಿಂದ ಎದ್ದು ಅತ್ತಿತ್ತ ಅಲೆದಾಡಿದ. ಆ ಮೇಲೆ ಮನೆಯಿಂದ ಹೊರಗೆ ಹೋದ. ಮನೆಯ ಹೊರಗೆ ಬಂದು ಕಿಟಕಿಯಲ್ಲಿ ಒಳಗೆ ಹಣಕಿದ. ಆ ಕೋಣೆಯಲ್ಲಿ ಸಿದ್ಧಾರ್ಥ ಹಾಗೆಯೇ ನಿಂತಿದ್ದಾನೆ. ಅವನ ಮೈಮೇಲಿನ ಶಾಲು ನಡುಗುತಿತ್ತು. ತಂದೆಯ ಹೃದಯ ತಳಮಳಗೊಂಡಿತು. ಪುನಃ ಹಾಸಿಗೆಗೆ ಬಂದು ಒರಗಿದ.

ಮತ್ತೊಂದು ತಾಸು ಕಳೆಯಿತು. ಪುನಃ ಅವನು ಹೊರಗೆ ಬಂದು ಕಿಟಕಿಯ ಮೂಲಕ ಇಣಿಕಿದ. ಸಿದ್ಧಾರ್ಥ ಕಲ್ಲಿನ ಮೂರ್ತಿಯಂತೆ ನಿಂತಿದ್ದ. ಬೆಳದಿಂಗಳೂ ನಕ್ಷತ್ರಗಳ ಬೆಳಕೂ ಅವನ ಮೇಲೆ ಅಲ್ಪಸ್ವಲ್ಪ ಬಿದ್ದಿದ್ದುವು. ಕೋಣೆಯ ಬಹುಭಾಗದಲ್ಲಿ ಮಾತ್ರ ಕತ್ತಲೆಯೇ. ಆ ಮೇಲೆ ತಾಸುತಾಸಿಗೊಮ್ಮೆ ಇದೇ ರೀತಿ ಬಂದು ನೋಡಿದ. ಆಗಲೂ ಮಗನು ಅಲ್ಲೇ ಇದ್ದ. ತಂದೆ ಕ್ರೋಧ, ಚಿಂತೆ, ಭಯ, ದುಃಖಗಳಿಂದ ಜರ್ಜರಿತನಾದ.

ರಾತ್ರಿಯ ಕೊನೆಯ ಜಾವದಲ್ಲಿ, ಸುಪ್ರಭಾತದ ಮೊದಲು, ಅವನು ಪುನಃ ಕೋಣೆಗೆ ಪ್ರವೇಶಿಸಿದ. ಸಿದ್ಧಾರ್ಥ ಮೊದಲಿನಂತೆಯೇ ನಿಂತುದುದನ್ನು ಕಂಡ. ಮಗನು ಎತ್ತರ ಬೆಳದಂತೆಯೂ ಪರಕೀಯ ವ್ಯಕ್ತಿಯಂತೆಯೂ ಕಾಣಿಸಿದ.

ತಂದೆ ಮತ್ತೆ ಕೇಳಿದ: "ಸಿದ್ಧಾರ್ಥ, ಯಾಕೆ ನಿಂತುಕೊಂಡೆ?''

" ನಿನಗೆ ಗೊತ್ತಿದೆಯಲ್ಲ !"

"ಸೂರ್ಯೋದಯ, ಮಧ್ಯಾಹ್ನ, ಸಂಜೆಯಾಗುವ ವರೆಗೂ ಹೀಗೆಯೇ ನಿಂತುಕೊಳ್ಳುವೆಯಾ ?"

" ನಿಂತುಕೊಳ್ಳುವೆ. "

" ನೀನು ಬಳಲಬಹುದು."

" ಬಳಲುವೆ."

" ನಿನಗೆ ನಿದ್ದೆ ಬರಬಹುದು.''

"ನಿದ್ದೆ ಮಾಡಲಾರೆ.''

" ನೀನು ಸಾಯಬಹುದು "

"ಸಾಯಲೂ ಬಹುದು."

"ತಂದೆಗೆ ವಿಧೇಯನಾಗುವದಕ್ಕಿಂತ ಸಾಯಲು ಇಷ್ಟಪಡುವೆಯಾ?"

"ಸಿದ್ಧಾರ್ಥನು ಯಾವಾಗಲೂ ತಂದೆಗೆ ವಿಧೇಯನಾಗಿದ್ದ."

"ಹಾಗಿದ್ದರೆ ನಿನ್ನ ಯೋಜನೆ ಬಿಟ್ಟುಬಿಡುವೆಯಾ?"

"ತಂದೆ ಹೇಳಿದಂತೆ ಮಾಡಲು ಸಿದ್ಧಾರ್ಥನು ಸಿದ್ಧ."

ಅರುಣೋದಯವಾಯಿತು. ಸಿದ್ಧಾರ್ಥನ ಕಾಲುಗಳು ಸ್ವಲ್ಪ ನಡುಗುತ್ತಿದ್ದುವು. ಆದರೆ ಅವನ ಮೋರೆಯಲ್ಲಿ ನಡುಕವಿರಲಿಲ್ಲ. ಅವನ ದೃಷ್ಟಿ ಬಹು ದೂರ ಇದ್ದಂತೆ ತಂದೆಗೆ ತೋರಿತು. ತನ್ನೊಂದಿಗೆ ಮನೆಯಲ್ಲಿ ಸಿದ್ಧಾರ್ಥ ಇನ್ನು ನಿಲ್ಲಲಾರ; ಅವನು ಈಗಾಗಲೇ ಹೊರಟು ಹೋಗಿದ್ದಾನೆಂದು ತಂದೆಗೆ ಮನದಟ್ಟಾಯಿತು.

ಸಿದ್ಧಾರ್ಥನ ಭುಜವನ್ನು ಹಿಡಿದು ತಂದೆ ಹೇಳಿದ: "ನೀನು ಕಾಡಿಗೆ ಹೋಗು. ಸನ್ಯಾಸಿಯಾಗು. ವನದಲ್ಲಿ ನಿನಗೆ ಆನಂದ ಲಭಿಸಿದರೆ ಮರಳಿ ಬಾ ಮತ್ತು ನನಗೆ ಕಲಿಸು. ಹತಾಶನಾದರೂ ಮತ್ತೆ ಬಾ. ನಾವಿಬ್ಬರೂ ಒಟ್ಟಿಗೆ ಪುನಃ ಯಜ್ಞಯಾಗಗಳನ್ನು ಮಾಡೋಣ. ಇನ್ನು ಹೊರಡು, ತಾಯಿಯನ್ನು ಕಂಡು ನೀನೆಲ್ಲಿ ಹೋಗುತ್ತೀ ಎಂದು ಹೇಳು. ನನಗೆ ನದಿಗೆ ತೆರಳಿ ತೀರ್ಥಸ್ನಾನ ಮಾಡುವ ಹೊತ್ತಾಯಿತು."

ಭುಜದಿಂದ ಕೈ ತೆಗೆದು ಅವನು ಹೊರಟು ಹೋದ. ನಡೆದಾಗ ಸಿದ್ಧಾರ್ಥ ಬೀಳುವಂತಾದ. ಚೇತರಿಸಿಕೊಂಡು ತಂದೆಗೆ ನಮಸ್ಕರಿಸಿ ತಾಯಿ ಇದ್ದಲ್ಲಿ ತೆರಳಿದ.

ಕಾಲುಗಳು ಮರಗಟ್ಟಿದ್ದರೂ ಬೆಳಗು ಮುಂಜಾನೆ ಇನ್ನೂ ನಿದ್ದೆಯಲ್ಲಿದ್ದ ನಗರವನ್ನು ತ್ಯಜಿಸಿ ಮೆಲ್ಲಗೆ ಹೊರಟ. ಕೊನೆಯ ಗುಡಿಸಲಿನಿಂದ ಬಗ್ಗಿದ ಮತ್ತೊಂದು ನೆರಳೂ ಈ ಯಾತ್ರಿಕನನ್ನು ಹಿಂಬಾಲಿಸಿತು. ಅವನು ಗೋವಿಂದ.

"ನೀನೂ ಬಂದೆಯಾ!" ಎಂದು ಸಿದ್ಧಾರ್ಥ ಹೇಳಿ ಮುಗುಳ್ನಗೆ ಬೀರಿದ.

"ಹೌದು. ಬಂದೆ."

# ೨ ನೆಯ ಅಧ್ಯಾಯ

ಮರುದಿನ ದಿನ ಸಂಜೆ ಅವರು ಆ ಸನ್ಯಾಸಿಗಳನ್ನು ಕೂಡಿಕೊಂಡರು. ತಮ್ಮನ್ನು ಒಡನಾಡಿಗಳಾಗಿ ಅಂಗೀಕರಿಸಬೇಕೆಂದೂ ಬಿನ್ನವಿಸಿಕೊಂಡರು. ಆ ಸನ್ಯಾಸಿಗಳು ಅದಕ್ಕೊಪ್ಪಿಕೊಂಡರು.

ಸಿದ್ಧಾರ್ಥ ಒಂದು ಕೌಪೀನ ಮತ್ತು ಹರಕು ಕಾವಿ ಶಾಟಿ ಮಾತ್ರ ಇಟ್ಟುಕೊಂಡಿದ್ದ. ಉಳಿದ ಬಟ್ಟೆಗಳನ್ನೆಲ್ಲ ರಸ್ತೆಯಲ್ಲಿ ಭೆಟ್ಟಿಯಾದ ಒಬ್ಬ ಬಡ ಬ್ರಾಹ್ಮಣನಿಗೆ ಕೊಟ್ಟಿದ್ದ. ದಿನಕ್ಕೊಪ್ಪತ್ತು ಮಾತ್ರ ಆಹಾರ ಸ್ವೀಕಾರ. ಆಹಾರವನ್ನೂ ಬೇಯಿಸುತಿದ್ದಿಲ್ಲ. ಒಮ್ಮೆ ಅವನು ಹದಿನಾಲ್ಕು ದಿನಗಳ ವರೆಗೆ ಉಪವಾಸ ವ್ರತವನ್ನು ಕೈಕೊಂಡ. ಮತ್ತೊಮ್ಮೆ ಇಪ್ಪತ್ತೆಂಟು ದಿನಗಳ ವರೆಗೆ. ಅವನ ಕೆನ್ನೆ, ಕೈಕಾಲುಗಳಲ್ಲಿದ್ದ ಕೊಬ್ಬಿದ ಮಾಂಸ ಕರಗಿತು. ವಿಶಾಲವಾದ ಅವನ ಕಣ್ಣಾಲಿಗಳಲ್ಲಿ ವಿಚಿತ್ರ ಕನಸುಗಳು ಪ್ರತಿಬಿಂಬಿಸುತಿದ್ದುವು. ನೀಳವಾದ ಅವನ ಕೈಬೆರಳುಗಳ ತುದಿಯ ಉಗುರುಗಳು ಉದ್ದವಾದುವು. ಒಣಗಿದ ಬಿರುಸು ಗಡ್ಡವೂ ಬೆಳೆಯಿತು. ಸ್ತ್ರೀಯರನ್ನು ಕಂಡಾಗ ಅವನ ನೋಟವು ಕಠೋರವಾಗುತಿತ್ತು. ಶೃಂಗಾರವಾದ ಉಡುಗೆ ತೊಡುಗೆಗಳನ್ನು ಧರಿಸಿ ತಿರುಗುವ ಜನರಿಂದ ತುಂಬಿದ ನಗರದಲ್ಲಿ ಹಾದು ಹೋಗುವಾಗ ಸಿದ್ಧಾರ್ಥ ತಿರಸ್ಕಾರದಿಂದ ನಗುತಿದ್ದ. ವಣಿಕರು ಮಾಡುತ್ತಿರುವ ವ್ಯಾಪಾರವನ್ನೂ, ರಾಜಕುಮಾರರು ಬೇಟೆಗೆ ಹೊರಡುತ್ತಿರುವದನ್ನೂ, ಸತ್ತವರಿಗಾಗಿ ಅಳುತ್ತಿರುವದನ್ನೂ ಅವನು ನೋಡಿದ. ವೇಶ್ಯೆಯರ ದೇಹ ವಿಕ್ರಯ, ರೋಗಿಗಳ ಉಪಚಾರ, ಪ್ರಣಯಿಗಳ ಪ್ರೇಮಲೀಲೆ, ತಾಯಂದಿರ ಶಿಶುಪಾಲನೆ ಇವುಗಳನ್ನು ಕಂಡ. ಆದರೆ ಇವೆಲ್ಲ ನೋಡಲರ್ಹವಾದವುಗಳೆಂದು ಅವನಿಗನಿಸಲಿಲ್ಲ. ಇದೆಲ್ಲ ಕಪಟ, ಸುಳ್ಳು, ಬರಿ ಮಿಥ್ಯೆ. ಈ ಸುಖ ಸೌಂದರ್ಯಗಳೆಲ್ಲ ಇಂದ್ರಿಯಗಳ ಭ್ರಮೆ. ಇವೆಲ್ಲವುಗಳೂ ನಶ್ವರ. ಪ್ರಾಪಂಚಿಕ ಲೋಕ ಕಹಿ. ಜೀವನವು ದುಃಖ.

ಸಿದ್ಧಾರ್ಥನ ಮುಂದೆ ಒಂದೇ ಗುರಿಯಿದೆ. ಶೂನ್ಯಸ್ಥಿತಿ ಮುಟ್ಟಲು,

ಮೀನುಗಳನ್ನು ತಿಂದ. ಕೊಕ್ಕರೆಯಂತೆ ಹಸಿದ. ಅದರ ಭಾಷೆಯನ್ನಾಡಿದ. ಕೊಕ್ಕರೆಯಾಗಿ ಸತ್ತ. ನದಿಯ ದಡದ ಉಸುಕಿನ ಮೇಲೆ ಒಂದು ನರಿ ಸತ್ತು ಬಿದ್ದಿತ್ತು. ಸಿದ್ಧಾರ್ಥನ ಆತ್ಮವು ಆ ಕಳೇಬರದೊಳಗೆ ಪ್ರವೇಶಿಸಿತು. ಅವನೂ ಸತ್ತ ನರಿಯಾದ. ಆ ಮಳಲಿನಲ್ಲೇ ಬಿದ್ದುಕೊಂಡ. ನರಿಯ ರಕುತ ಮಾಂಸಗಳು ಉಬ್ಬಿ, ಕೊಳೆತು ದುರ್ವಾಸನೆ ಬಡಿಯಿತು. ಕಿರುಬಗಳು ಹರಿದು ತಿಂದುವು ರಣಹದ್ದುಗಳು ಕುಕ್ಕಿದುವು. ಎಲುಬುಗಳು ಉಳಿದುವು. ಅದೂ ಕೊನೆಗೆ ಪುಡಿಯಾಗಿ ದೂಳಾಗಿ ಮಣ್ಣಾಯಿತು. ಸಿದ್ಧಾರ್ಥನ ಆತ್ಮವು ಈ ಎಲ್ಲ ಜೀವನ ಚಕ್ರದ ಸಂಕಟಗಳ ಅನುಭವ ಪಡೆದು ಮತ್ತೆ ಮತ್ತೆ ಮರಳಿತು. ಬಾಯಾರಿದ ಬೇಟೆಗಾರನು ನೀರಿನ ಸೆಲೆ ಕಂಡಂತೆ, ಹುಟ್ಟುಸಾವುಗಳ ಚಕ್ರದ ಕೊನೆ ಹಾಗೂ ಅನಾದ್ಯನಂತತ್ವದ ಆರಂಭದ ರಹಸ್ಯವನ್ನರಿವ ದಾಹದಿಂದ ಚಡಪಡಿಸಿದ. ಪಂಚೇಂದ್ರಿಯಗಳ ಕಾತುರವನ್ನು ಮುರಿದ. ಸ್ಮರಣ ಶಕ್ತಿಯನ್ನು ತರಿದ. ದೇಹದಿಂದ ಹೊರಗೆ ಬಿದ್ದು ಸಾವಿರಾರು ಸ್ವರೂಪಗಳನ್ನು ತಾಳಿದ. ಅವನು ಪಶು, ಕಳೇಬರ, ಕಲ್ಲು, ಮರ, ನೀರಿನ ರೂಪಗಳನ್ನು ಧರಿಸಿದ. ಪ್ರತಿಸಲವೂ ಮತ್ತೆ ಜಾಗೃತನಾದ. ಮತ್ತೆ ಸಿದ್ಧಾರ್ಥನೇ ಆದ. ಸೂರ್ಯಚಂದ್ರರು ಎಂದಿನಂತೆ ಬೆಳಗುತಿದ್ದರು. ಪುನಃ ಅವನು ಈ ಜೀವನದ ಸುಳಿಯಲ್ಲೇ ಸುತ್ತುತಿದ್ದ. ಅವನಿಗೆ ಬಾಯಾರಿಕೆಯಾಯಿತು. ಅದನ್ನು ಇಂಗಿಸಿದ. ಆದರೆ ಈಗ ಹೊಸ ಜ್ಞಾನದಾಹವುಂಟಾಗಿದೆ.

ಸನ್ಯಾಸಿಗಳಿಂದ ಸಿದ್ಧಾರ್ಥ ಬಹಳ ಕಲಿತುಕೊಂಡ. ಅಹಂಕಾರವನ್ನು ತ್ಯಜಿಸುವ ಅನೇಕ ಉಪಾಯಗಳನ್ನು ತಿಳಿದ. ನೋವು, ಹಸಿವು, ದುಃಖ, ಬಾಯಾರಿಕೆ, ಬಳಲಿಕೆಗಳ ಮೂಲಕ ಆತ್ಮಸಂಯಮನವನ್ನು ಅರಿತ. ಧ್ಯಾನಮಗ್ನನಾಗಿ, ಶೂನ್ಯ ಮನಸ್ಕನಾಗಿ ಆತ್ಮಾಭಿಮಾನವನ್ನು ತೊರೆದ. ಈ ಹಾಗೂ ಇನ್ನಿತರ ದಾರಿಗಳನ್ನು ಹಿಡಿದು ನಡೆದ. ಸಾವಿರ ಸಲ ಹಾಗೂ ಅನೇಕ ದಿನಗಳ ಪರ್ಯಂತ ಅವನು ಶೂನ್ಯವಾಗಿದ್ದ. ಆದರೆ ಯಾವ ದಾರಿಯಿಂದ ಸಾಗಿದರೂ ಕೊನೆಗೆ ಹೊರಟಲ್ಲಿಗೇ ಬರುತಿದ್ದ. ಸಾವಿರ ಸಲ ಅವನು ಗರಿಗೆದರಿ ಹಾರಿದರೂ, ಶೂನ್ಯನಾಗಿದ್ದರೂ, ಪಶು ಪಕ್ಷಿ ಕಲ್ಲು ಮರಗಳಲ್ಲಿ ವಾಸಿಸಿದರೂ, ಮರುಯಾತ್ರೆ ತಪ್ಪುತಿದ್ದಿಲ್ಲ. ಆ

ಅವಧಿ ದಾಟಿದಾಗ ಬಿಸಿಲಿನಲ್ಲೋ, ಬೆಳದಿಂಗಳಲ್ಲೋ, ನೆರಳಿನಲ್ಲೋ, ಮಳೆಯಲ್ಲೋ ತಾನು, ಸಿದ್ಧಾರ್ಥ, ಇರುತಿದ್ದುದನ್ನು ಅವನು ಕಂಡ. ಅಲ್ಲದೆ ಜೀವನ ಚಕ್ರದ ಕಠಿಣ ಸಂವೇದನೆಗಳನ್ನು ಅನುಭವಿಸಿದ.

ಅವನೊಟ್ಟಿಗೆ ಅವನ ನೆರಳಾಗಿ ಗೋವಿಂದನೂ ಇದ್ದ. ಅವನೂ ಸಿದ್ಧಾರ್ಥನ ಪಥವನ್ನು ಹಿಡಿದ. ಅದೇ ರೀತಿ ಸಾಧಿಸಿದ. ಅಭ್ಯಾಸ ನಡೆದಾಗ ಅವಶ್ಯವಿದ್ದಷ್ಟೇ ಮಾತು. ಮತ್ತೆ ಅವರು ಮಾತು ಕೂಡಾ ಆಡುತ್ತಿರಲಿಲ್ಲ. ಒಮ್ಮೊಮ್ಮೆ ತಮ್ಮ ಗುರುಗಳಿಗೂ ತಮಗೂ ಭಿಕ್ಷಾನ್ನ ತರಲು ಇಬ್ಬರೂ ಕೂಡಿ ಹಳ್ಳಿಗಳಿಗೆ ತೆರಳುತಿದ್ದರು.

ಒಮ್ಮೆ ಭಿಕ್ಷಾಟನೆಗೆ ಹೊರಟಾಗ ಸಿದ್ಧಾರ್ಥ ಕೇಳಿದ: "ಗೋವಿಂದಾ ನಿನ್ನ ವಿಚಾರವೇನು? ನಾವು ಪ್ರಗತಿಯ ಸೋಪಾನಗಳನ್ನು ಏರಿರುವೆವೋ? ಗುರಿ ಮುಟ್ಟಿರುವೆವೇ?"

ಗೋವಿಂದ ಮೃದುವಾಗಿ ಉತ್ತರ ಕೊಟ್ಟ: "ನಾವು ಅನೇಕ ವಿಷಯಗಳನ್ನು ಕಲಿತೆವು. ಈಗಲೂ ಕಲಿಯುತಿದ್ದೇವೆ. ಸಿದ್ಧಾರ್ಥ, ನೀನು ದೊಡ್ಡ ಋಷಿಯಾಗುವೆ. ಪ್ರತಿಯೊಂದು ಪಾಠವನ್ನು ಥಕ್ಕನೆ ಹೆಕ್ಕಿಕೊಂಡೆ. ಒಂದಲ್ಲದಿನ್ನೊಂದು ದಿನ ನೀನು ಪರಮ ಪವಿತ್ರ ಮನುಷ್ಯನಾಗುವುದರಲ್ಲಿ ಸಂದೇಹವಿಲ್ಲ."

ಸಿದ್ಧಾರ್ಥ ನುಡಿದ: "ಮಿತ್ರಾ, ನನಗೆ ಮಾತ್ರ ಹಾಗೆನಿಸುವದಿಲ್ಲ. ಈ ಸನ್ಯಾಸಿಗಳಿಂದ ನಾನು ಕಲಿತುದುದನ್ನು ಇದಕ್ಕಿಂತಲೂ ಬೇಗನೇ ಪ್ರತಿಯೊಂದು ಛತ್ರದಲ್ಲೂ, ವೇಶ್ಯಾ ಗೃಹದಲ್ಲೂ, ಹೆಣ ಹೊರುವವರಲ್ಲೂ, ಜೂಜುಗಾರರಲ್ಲೂ ಕಲಿಯುತಿದ್ದೆ."

ಗೋವಿಂದ ವಿಸ್ಮಯದಿಂದ ಪ್ರಶ್ನಿಸಿದ: "ಸಿದ್ಧಾರ್ಥನು ಅಪಹಾಸ್ಯ ಮಾಡುತ್ತಿರುವಂತೆ ತೋರುತ್ತದೆ. ಆ ನೀಚರಿಂದ ಧ್ಯಾನ, ಯೋಗ, ಹಸಿವು ಸಂವೇದನಾತೀತ ಭಾವಗಳನ್ನೆಲ್ಲ ಅರಿಯಲು ಸಾಧ್ಯವೇ ?"

ಸಿದ್ಧಾರ್ಥ ತನಗೇ ಹೇಳಿಕೊಳ್ಳುವಂತೆ ಉಸುರಿದ: "ಧ್ಯಾನವೆಂದರೇನು ? ಯೋಗವೆಂದರೇನು ? ತನ್ನನ್ನು ತಾನು ಮರೆತು ಪಲಾಯನ ಮಾಡುವುದೇ ಆಗಿದೆ. ತಾತ್ಕಾಲಿಕವಾಗಿ ಆರೀತಿ ಆತ್ಮಬಾಧೆಯಿಂದ ಪಾರಾಗಬಹುದು ಜೀವನದ ಯಾತನೆ ಹಾಗೂ ಹುಚ್ಚುತನಗಳಿಗೆ ಅದು ತಾತ್ಪೂ

ರ್ತಿಕ ಪರಿಹಾರ. ಎತ್ತಿನ ಗಾಡಿ ಹೊಡೆಯುವವನೂ ಅದೇ ರೀತಿ ಮಾಡು ತ್ತಾನೆ. ಸರಾಯಿ ಅಂಗಡಿಯಲ್ಲಿ ಮದ್ಯ ಕುಡಿದು ಅವನು ಈ ತಾತ್ಕಾಲಿಕ ಔಷಧ ಸೇವಿಸುತ್ತಾನೆ. ಆಗ ಅವನಿಗೆ ದೇಹದ ಮೇಲಿನ ಎಚ್ಚರ ಇರುವುದೇ ಇಲ್ಲ ಜೀವನದ ದುಃಖ ದಾರಿದ್ರ್ಯಗಳು ಅವನನ್ನು ಬಾಧಿಸುವುದಿಲ್ಲ. ತಾತ್ಕಾಲಿಕ ಉಪಶಮನವನ್ನು ಮಾಡಿಕೊಂಡ ಅನುಭವವು ಅವನಿಗಾಗು ತ್ತದೆ. ಸಿದ್ಧಾರ್ಥ ಮತ್ತು ಗೋವಿಂದ ಇವರಿಬ್ಬರೂ ದೀರ್ಘಕಾಲದ ಅಭ್ಯಾಸ ಬಲದಿಂದ ನಿರಹಂಕಾರ ಸ್ಥಿತಿಗೇರುವುದನ್ನು ಆ ಗಾಡಿಯವನು ಸೆರೆ ಕುಡಿದು ಸಾಧಿಸುತ್ತಾನೆ "

"ಮಿತ್ರಾ, ನೀನು ಹೀಗೆ ಹೇಳುತ್ತೀಯಲ್ಲ! ಸಿದ್ಧಾರ್ಥನು ಎತ್ತಿನ ಡಿಕಾರನಲ್ಲ. ಸನ್ಯಾಸಿಯು ಸೆರೆಗುಡುಕನಲ್ಲ. ಮದ್ಯಪ್ರಿಯನು ಸಂವೇದನೆ ಗಳಿಂದ ಪಾರಾಗಬಹುದು. ಅಲ್ಪಾವಧಿಯ ವರೆಗೆ ಅವನಿಗೆ ವಿಶ್ರಾಂತಿ ದೊರೆ ಯುವುದೂ ನಿಜ ಆದರೆ ಬೇಗನೇ ಅವನಿಗೆ ಈ ಭ್ರಮನಿರಸನವಾಗುತ್ತದೆ. ಮತ್ತು ಮೊದಲಿನ ಸ್ಥಿತಿಯೇ ಉಂಟಾಗುತ್ತದೆ. ಅವನ ಬುದ್ಧಿ ಬೆಳೆದಂತಾ ಗಲಿಲ್ಲ. ಅವನು ಜ್ಞಾನ ಸಂಪಾದಿಸಿದಂತಾಗಲಿಲ್ಲ. ಅವನು ಉನ್ನತ ಸೋಪಾನವನ್ನೇರಲಿಲ್ಲ".

ಸಿದ್ಧಾರ್ಥ ಮುಗುಳು ನಗುತ್ತಾ ಎಂದ: " ನನಗೆ ಗೊತ್ತಿಲ್ಲ. ನಾನೆಂದೂ ಸೆರೆಗುಡುಕನಾಗಿರಲಿಲ್ಲ. ಆದರೆ ಈ ಸಿದ್ಧಾರ್ಥನಿಗೆ ಧ್ಯಾನ ಹಾಗೂ ಯೋಗಾಭ್ಯಾಸಗಳಿಂದ ಅಲ್ಪ ಶಾಂತಿ ಮಾತ್ರ ದೊರೆಯುತ್ತದೆ. ಜ್ಞಾನ ಮತ್ತು ಮೋಕ್ಷಗಳಿಂದ ನಾನು ಬಹಳ ದೂರ ಇದ್ದೇನೆ. ಪ್ರಾಯಶಃ ತಾಯಿ ಗರ್ಭದಲ್ಲಿರುವ ಶಿಶುವಿನಂತೆ ಎಂದರೂ ಸರಿಯೇ. ಗೋವಿಂದಾ, ಇದನ್ನು ನಾನು ಚೆನ್ನಾಗಿ ತಿಳಿದಿದ್ದೇನೆ".

ಇನ್ನೊಮ್ಮೆ ಅವರೀರ್ವರೂ ಕಾಡನ್ನು ಬಿಟ್ಟು ನಾಡಿಗೆ ಭಿಕ್ಷೆಗಾಗಿ ಬಂದಾಗ ಸಿದ್ಧಾರ್ಥ ಮಾತಿಗಾರಂಭಿಸಿದ: "ಗೋವಿಂದಾ, ನಾವು ಸರಿ ಯಾದ ದಾರಿಯಲ್ಲಿ ಇರುವೆವೇ? ನಾವು ಜ್ಞಾನಾರ್ಜನೆ ಮಾಡುತಿದ್ದೇ ವೆಯೇ? ಮೋಕ್ಷಕ್ಕೆ ನಾವು ಸಮೀಪಿಸುತ್ತಿರುವೆವೇ? ಅಥವಾ ನಾವು ಚಕ್ರದಲ್ಲಿ ಮತ್ತೆ ಮತ್ತೆ ಸುಳಿಯುತ್ತಿರುವೆವೇ? ಈ ಸುಳಿಯಿಂದ ಪಾರಾ ಗಲು ನಾವು ಬಯಸುತ್ತಿರುವೆವಲ್ಲ!"

ಅದಕ್ಕೆ ಗೋವಿಂದ ಉತ್ತರವಿತ್ತ: "ಸಿದ್ಧಾರ್ಥ, ನಾವು ಬಹಳ ಅಭ್ಯಾಸ ಮಾಡಿದ್ದೇವೆ. ಆದರೆ ಕಲಿಯತಕ್ಕುದು ಇನ್ನೂ ಇದೆ. ಚಕ್ರದಂತೆ ನಾವು ಒಂದೇ ಸುಳಿಯಲ್ಲಿ ಸುತ್ತುತ್ತಿರುವುದಿಲ್ಲ. ನಾವು ಮೇಲೆ ಮೇಲೆ ಏರುತಿದ್ದೇವೆ. ಈ ದಾರಿ ನಾಗಮುರಿಯಂತಿದೆ. ನಾವು ಇಷ್ಟರೊಳಗೆ ಅನೇಕ ಮೆಟ್ಟಲುಗಳನ್ನು ಏರಿ ಬಂದಿದ್ದೇವೆ."

"ಮಿತ್ರಾ, ನಮ್ಮ ಈ ಗುರುವಿಗೆ ಎಷ್ಟು ವರುಷಗಳಾಗಿರಬಹುದು?"

"ಅರುವತ್ತು."

"ಅವನಿಗೆ ೬೦ ವರುಷ ಆದರೆ ಅವನು ಇನ್ನೂ ನಿರ್ವಾಣ ಸಾಧಿಸಿಲ್ಲ. ವರುಷಗಳು ಕಳೆದಂತೆ ಅವನು ೭೦ ಮತ್ತು ೮೦ರ ಮುದುಕನಾಗಬಹುದು. ಆಗ ಈಗ ಅವನಿದ್ದಂತೆ, ನಮಗೂ ವೃದ್ಧಾಪ್ಯ ಬರುತ್ತಿದೆ. ಉಪವಾಸ, ಧ್ಯಾನ, ಯೋಗಾಭ್ಯಾಸಗಳನ್ನು ನಾನೂ ನೀನೂ ಮಾಡುತ್ತಿರುತ್ತೇವೆ. ಆದರೆ ನಾವಾಗಲೀ ಅವನಾಗಲೀ ನಿರ್ವಾಣ ಸಾಧಿಸುವುದು ಸಂದೇಹಾಸ್ಪದ. ಗೋವಿಂದಾ, ಈ ಸನ್ಯಾಸಿಗಳಲ್ಲಿ ಒಬ್ಬರೂ ನಿರ್ವಾಣ ಸ್ಥಿತಿ ಹೊಂದಲಾರರು. ನಮ್ಮ ಮನಸ್ಸನ್ನು ಅವರು ಸಂತೈಸುತ್ತಾರೆ. ನಾವು ಕೆಲವು ತಂತ್ರಗಳನ್ನು ಕಲಿಯುತ್ತೇವೆ. ಇವುಗಳಿಂದ ನಾವು ನಮ್ಮನ್ನೇ ವಂಚಿಸಿಕೊಳ್ಳುತ್ತೇವೆ. ಆದರೆ ಮುಖ್ಯವಾದ ಆ ದಾರಿ ಮಾತ್ರ ಅಗೋಚರವಾಗಿದೆ.''

"ಸಿದ್ಧಾರ್ಥ! ಇಂತಹ ಭಯಾನಕ ಮಾತುಗಳನ್ನಾಡಬೇಡ. ಇಷ್ಟು ವಿದ್ವಾಂಸರಲ್ಲಿ, ಬ್ರಾಹ್ಮಣರಲ್ಲಿ, ಶುದ್ಧ ತಪಸ್ವಿಗಳಲ್ಲಿ, ಸಾಧಕರಲ್ಲಿ, ಆತ್ಮಶೋಧಕ ನಿಷ್ಠರಲ್ಲಿ, ಪವಿತ್ರ ಮಾನವರಲ್ಲಿ, ಒಬ್ಬರೂ ನಿಜವಾದ ಮಾರ್ಗವನ್ನು ಕಾಣಲಾರರೇ?''

ಸಿದ್ಧಾರ್ಥ ಮೆಲುಸ್ವರದಲ್ಲಿ ಹೇಳಿದ. ಅವನ ಉತ್ತರದಲ್ಲಿ ವ್ಯಂಗವೂ ದುಃಖವೂ ಹುದುಗಿತ್ತು: "ಗೋವಿಂದಾ, ನಿನ್ನ ಗೆಳೆಯ ಇನ್ನು ಈ ಸನ್ಯಾಸಿಗಳೊಡನೆ ಇರಲಾರ. ನಿನ್ನೊಡನೆ ಇಷ್ಟು ದೀರ್ಘ ಕಾಲದ ವರೆಗೆ ನಡೆದು ಬಂದ ದಾರಿಯನ್ನು ತೊರೆದು ಹೋಗುತ್ತಾನೆ. ನಾನು ಬಾಯಾರಿಕೆಯಿಂದ ಬಳಲುತಿದ್ದೇನೆ. ಈ ಸನ್ಯಾಸಿಗಳ ರಸ್ತೆಯಲ್ಲಿ ನಡೆದು ಬಂದಾಗ ಆ ತೃಷೆ ಏನೇನೂ ಕಡಿಮೆಯಾಗಲಿಲ್ಲ. ಜ್ಞಾನತೃಷೆ ಎಂದಿನಿಂದಲೂ ನನ್ನನ್ನು ಬಾಧಿಸುತ್ತಿದೆ. ನನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳೇ ದೊರೆತಿಲ್ಲ.

ಅನೇಕ ವರುಷಗಳ ವರೆಗೆ ನಾನು ಬ್ರಾಹ್ಮಣರನ್ನು ಪ್ರಶ್ನಿಸಿದೆ. ಅನೇಕ ವರುಷಗಳ ವರೆಗೆ ನಾನು ವೇದ ಪಠಿಸಿದೆ ಅವಕ್ಕಿಂತ ನಾನು ಖಡ್ಗ ಮೃಗ ಅಥವಾ ಮಂಗನನ್ನು ಕೇಳುತಿದ್ದರೆ ಹಿತವಾಗುತ್ತಿತ್ತು. ಪರೋಪದೇಶದಿಂದ ಏನನ್ನೂ ತಿಳಿಯಲು ಅಸಾಧ್ಯವೆಂದು ನಾನು ಅರಿಯಲು ಇಷ್ಟು ಕಾಲ ಕಳೆದೆ. ಮತ್ತು ಆ ಅವಧಿ ಇನ್ನೂ ಮುಗಿದಿಲ್ಲ. ನೋಡು, ಪ್ರತಿಯೊಂದರ ಸಾರವನ್ನು ಅರಿಯಲೆತ್ನಿಸುವುದು ವಿದ್ಯೆಯಲ್ಲ. ಜ್ಞಾನವೊಂದೇ ವಿದ್ಯೆ. ಅದು ಸರ್ವಂತ ರ್ಯಾಮಿಯಾಗಿದೆ. ಅದು ಆತ್ಮ, ಅದು ನನ್ನಲ್ಲಿದೆ. ನಿನ್ನಲ್ಲಿದೆ. ಅದು ಪ್ರತಿ ಯೊಂದು ಪಶು ಪಕ್ಷಿ ಕ್ರಿಮಿಕೀಟಗಳಲ್ಲಿದೆ. ಈ ಜ್ಞಾನಕ್ಕೆ ಪಾಂಡಿತ್ಯ ಹಾಗೂ ವಿದ್ಯಾಸಂಪನ್ನನಾದ ಮನುಷ್ಯನೇ ದೊಡ್ಡ ವೈರಿ."

ಸಿದ್ಧಾರ್ಥನ ಮಾತುಗಳನ್ನು ಕೇಳಿ ಗೋವಿಂದ ಅವಕ್ಕಾದ. ನಡೆಯು ತಿದ್ದವನು ಅಲ್ಲೇ ಸ್ತಂಭೀಭೂತನಾದ. ಎರಡು ಕೈಗಳನ್ನು ಮೇಲಕ್ಕೆತ್ತಿ "ಸಿದ್ಧಾರ್ಥ, ಇಂಥ ಮಾತುಗಳನ್ನಾಡಿ ನನ್ನನ್ನು ದುಃಖಕ್ಕೊಳಗು ಮಾಡ ಬೇಡ. ನಿನ್ನ ಮಾತುಗಳನ್ನು ಕೇಳಲು ನನಗೆ ಕಷ್ಟವಾಗುತ್ತದೆ. ನಮ್ಮ ಪವಿತ್ರ ಪ್ರಾರ್ಥನೆ (ಜಪ) ಗಳಿಗೆ ಎಂತಹ ಅರ್ಥವಿದೆ, ಬ್ರಾಹ್ಮಣರೆಷ್ಟು ಪೂಜ್ಯರು ಮತ್ತು ಸನ್ಯಾಸಿಗಳೆಷ್ಟು ಪವಿತ್ರ ಜೀವಿಗಳು ಆಲೋಚಿಸು. ಜ್ಞಾನ ಸಂಪಾದಿಸಿರದಿದ್ದರೆ ಇದೆಲ್ಲ ಸಾಧ್ಯವೇ ? ಇಲ್ಲದಿದ್ದರೆ ಈ ಪ್ರಪಂಚ ದಲ್ಲಿರುವುದರ ಗತಿಯೇನಾದೀತು ? ಈ ಜಗತ್ತಿನಲ್ಲಿ ಪವಿತ್ರವಾದುದು ಮತ್ತೇ ನಿದೆ ? ಬೆಲೆಯುಳ್ಳದುದೂ ಪವಿತ್ರವಾದುದೂ ಮತ್ತೇನು?" ಎಂದು ನುಡಿದ. ಆ ಮೇಲೆ ಉಪನಿಷತ್ತಿನ ಒಂದು ವಾಕ್ಯವನ್ನು ಗುಣುಗಿದ.

ಸಿದ್ಧಾರ್ಥ ಮೌನವಾದ. ಗೋವಿಂದ ಆಡಿದ ಮಾತುಗಳನ್ನೇ ಅವನು ಬಹಳ ಹೊತ್ತು ಆಲೋಚಿಸಿದ.

ಹೌದು. ನಮಗೆಲ್ಲ ಅತಿ ಪವಿತ್ರವಾಗಿ ತೋರುತ್ತಿರುವುದರಲ್ಲಿ ಉಳಿ ಯುವುದು ಯಾವುದು ? ಏನು ಉಳಿಯುತ್ತದೆ ? ಯಾವುದು ಸ್ಥಿರ ? ಅವನು ಈ ರೀತಿ ಪರಿಪರಿಯಾಗಿ ವಿಚಾರಿಸಿದ. ಮತ್ತೆ ತಲೆ ಅಲ್ಲಾಡಿಸಿದ.

ಹಿಂದೊಮ್ಮೆ, ಮೂರು ವರುಷಗಳ ಹಿಂದೆ ಅವರಿಬ್ಬರೂ ಸನ್ಯಾಸಿಗಳೊ ಡನಿದ್ದಾಗ, ಅನೇಕರಿಂದ ಅವರೊಂದು ಪಿಸು ಪಿಸು ಸುದ್ದಿ ಕೇಳಿದ್ದರು. ಗೌತಮ, ಜಗಜ್ಜ್ಯೋತಿ, ಬುದ್ಧ ಅವನ ಅವತಾರವಾಗಿದೆಯಂತೆ ! ಅವನು

ತಾನೇ ತನ್ನೊಳಗೇ, ಜಗತ್ತಿನ ದುಃಖಗಳನ್ನೆಲ್ಲ ಜಯಿಸಿರುವನು. ಪುನರ್ಜನ್ಮದ ಚಕ್ರವನ್ನು ನಿಲ್ಲಿಸಿರುವನು. ದೇಶದಾದ್ಯಂತ ಬೋಧಿಸುತ್ತ ಸಂಚರಿಸುತ್ತಿರುವನು. ಅವನ ಹಿಂದೆ ಬಹಳ ಶಿಷ್ಯರಿದ್ದಾರೆ. ಮನೆ, ಆಸ್ತಿಪಾಸ್ತಿ, ಹೆಂಡತಿ, ಏನೂ ಇಲ್ಲ ಸನ್ಯಾಸಿಯಂತೆ ಒಂದು ಕಾವಿ ಶಾಟಿಯನ್ನು ಹೊದ್ದಿರುವನು. ಅವನ ಹಣೆಯು ವಿಶಾಲವಾಗಿದೆ. ಪುಣ್ಯಾತ್ಮನು. ಬ್ರಾಹ್ಮಣರೂ ರಾಜರೂ ಅವನಿಗೆ ಶಿರಬಾಗುತ್ತಾರೆ ಮತ್ತು ಅವನ ಶಿಷ್ಯರಾಗುತ್ತಿದ್ದಾರೆ!

ಈ ವರ್ತಮಾನ, ಕತೆಗಳನ್ನು ಎಲ್ಲರೂ ಕೇಳುವವರೇ. ಎಲ್ಲರೂ ಹೇಳುವವರೇ. ಹೀಗಾಗಿ ಅದು ಅತ್ತಿತ್ತ ಪಸರಿಸಿತು. ನಗರದಲ್ಲಿರುವ ಬ್ರಾಹ್ಮಣರು ಅದೇ ಮಾತುಗಳನ್ನಾಡುತಿದ್ದರು. ಅರಣ್ಯದಲ್ಲಿರುವ ಸನ್ಯಾಸಿಗಳ ಬಾಯಲ್ಲೂ ಅದೇ. ಗೌತಮ ಬುದ್ಧನನ್ನು ಮನ್ನಿಸಿ, ಹೀನೈಸಿ, ಹೊಗಳಿ, ತೆಗಳಿ ಆಡುವ ಮಾತುಗಳನ್ನು ತರುಣರು ಯಾವಾಗಲೂ ಕೇಳತೊಡಗಿದರು.

ಒಂದು ದೇಶದಲ್ಲಿ ಸಾಂಕ್ರಾಮಿಕ ರೋಗವು ಹಾವಳಿಯನ್ನೆಬ್ಬಿಸಿದಾಗ ಅದನ್ನು ಗುಣಪಡಿಸುವ ಮನುಷ್ಯನೊಬ್ಬನು ಅಥವಾ ಮಹಾಪುರುಷನಿದ್ದಾನೆ; ಅವನೊಂದು ಮಾತನಾಡಿದರೆ ರೋಗ ಪರಿಹಾರವಾಗುತ್ತದೆ ಎಂದು ಸುದ್ದಿ ಹುಟ್ಟಿದರೆ, ಆ ಸುದ್ದಿ ನಾಡಿನಲ್ಲೆಲ್ಲ ಪಸರಿಸಿದರೆ ಮತ್ತು ಪ್ರತಿಯೊಬ್ಬರೂ ಅದೇ ವಿಷಯವನ್ನಾಡತೊಡಗಿದರೆ ಅನೇಕರು ಅದನ್ನು ನಂಬುವುದು ಸಹಜ. ಕೆಲವರು ಅದರ ಬಗ್ಗೆ ಸಂದೇಹಪಡುವುದೂ ಉಂಟು. ಆದರೆ ಹೆಚ್ಚಿನವರು ಆ ಜ್ಞಾನಿಯನ್ನೂ ಉಪಕಾರಿಯನ್ನೂ ಹುಡುಕಲೆತ್ನಿಸುವರು. ಇದೇ ರೀತಿ ಶಾಕ್ಯ ವಂಶದ ಮಹಾತ್ಮನಾದ ಆ ಗೌತಮ ಬುದ್ಧನ ಕೀರ್ತಿ ದೇಶದಲ್ಲಿ ವ್ಯಾಪಿಸಿತು. ಅವನು ಮಹಾಜ್ಞಾನಿ; ಅವನಿಗೆ ಹಿಂದಿನ ಜನ್ಮಗಳ ಸ್ಮರಣೆಯಿದೆ; ಅವನು ನಿರ್ವಾಣ ಸ್ಥಿತಿ ಹೊಂದಿದ್ದಾನೆ; ಹುಟ್ಟು ಸಾವುಗಳ ಚಕ್ರದ ಸುಳಿಯಲ್ಲಿ ಸಿಲುಕಿಲ್ಲ; ಅವನಿಗಿನ್ನು ಪುನರ್ಜನ್ಮವಿಲ್ಲವೆಂದೆನ್ನುತಿದ್ದರು. ಅವನ ಬಗ್ಗೆ ಅನೇಕ ಆಶ್ಚರ್ಯಕರ ಮತ್ತು ಅದ್ಭುತ ಸಂಗತಿಗಳನ್ನು ಹೇಳುತಿದ್ದರು. ಅವನು ಅನೇಕ ಸೋಜಿಗ ಕಾರ್ಯಗಳನ್ನು ಮಾಡಿ ತೋರಿಸಿರುವನು; ದೆವ್ವಗಳನ್ನು ಜಯಿಸಿರುವನು; ದೇವತೆಗಳೊಡನೆ ಸಂಭಾಷಿಸಿರುವನು ಎಂದು.

"ಅವನೊಬ್ಬ ದಗಲು ಬಾಜಿ" ಎಂದು ಅವನ ವೈರಿಗಳನ್ನುತ್ತಿದ್ದರು ಅವನು ಶ್ರೀಮಂತರಂತೆ ವಾಸಿಸುತ್ತಾನೆ, ಯಜ್ಞ ಯಾಗಗಳನ್ನು ತಿರಸ್ಕರಿಸುತ್ತಿದ್ದಾನೆ. ವಿದ್ವಾಂಸನಲ್ಲ, ಧಾರ್ಮಿಕ ವಿಧಿ ವಿಧಾನಗಳು ಗೊತ್ತಿಲ್ಲ, ದೇಹ ದಂಡನೆಯ ಕ್ರಮಗಳೂ ತಿಳಿದಿಲ್ಲ ಎಂದು ಹೀಯ್ಯಾಳಿಸುತ್ತಿದ್ದರು.

ಬುದ್ಧನ ಕೀರ್ತಿ ಬಹಳ ಆಕರ್ಷಕ. ಅದೊಂದು ಇಂದ್ರಜಾಲದಂತೆಯೇ ಇತ್ತು. ಜಗತ್ತು ದುಃಖದಿಂದ ತುಂಬಿದೆ. ಜನಜೀವನವು ಕಷ್ಟಮಯ ವಾಗಿದೆ. ಇಂಥ ಪರಿಸ್ಥಿತಿಯಲ್ಲಿ ಇಲ್ಲೊಂದು ಅಲ್ಲೊಂದು ಹೊಸ ಬೆಳಕು ಕಂಡಿತು. ಇಲ್ಲಿಂದ ಅಲ್ಲಿಂದ ನೂತನ ಸಂದೇಶವೊಂದು ಕೇಳಿಬರತೊಡಗಿತು. ಅದರ ಕಡೆ ಜನ ಆಶಾದೃಷ್ಟಿಯಿಂದ ನೋಡಲಾರಂಭಿಸಿದರು. ದಶದಿಕ್ಕು ಗಳಲ್ಲೂ ಬುದ್ಧನ ಕೀರ್ತಿಯೇ ಕೀರ್ತಿ ಭಾರತದ ತರುಣರೆಲ್ಲ ಕಿವಿಗೊಟ್ಟು ಆಲಿಸಿದರು. ಅವನನ್ನು ಕಾಣಲು, ಅವನ ಮಾತುಗಳನ್ನು ಕೇಳಲು ಹಂಬಲಿ ಸಿದರು. ಮಹಾತ್ಮನಾದ ಈ ಶಾಕ್ಯ ಮುನಿಯ ವೃತ್ತಾಂತವನ್ನು ತಿಳಿಸುವ ಯಾತ್ರಿಕರನ್ನು ಅಪರಿಚಿತರನ್ನು ಹಳ್ಳಿಪಳ್ಳಿ ಪೇಟೆ ಪಟ್ಟಣದಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರ ಮಕ್ಕಳು ಅತ್ಯಾದರದಿಂದ ಸ್ವಾಗತಿಸುತ್ತಿದ್ದರು.

ಈ ಸುದ್ದಿ ಕಾಡಿನಲ್ಲಿದ್ದ ಆ ಸನ್ಯಾಸಿಗಳ ಕಿವಿಗೂ ಮುಟ್ಟಿತು. ಸಿದ್ಧಾರ್ಥ ಮತ್ತು ಗೋವಿಂದ ಕೂಡಾ ಕೇಳಿದರು. ಆಗಾಗ ಅಲ್ಪಸ್ವಲ್ಪ ಅವರ ಕಿವಿಗೆ ಬಿತ್ತು. ಆದರೆ ಅದನ್ನು ಆಲಿಸಿದಂತೆ ಅವರ ಆಶೆ ಪ್ರಜ್ವಲಿಸ ತೊಡಗಿತು. ಒಮ್ಮೊಮ್ಮೆ ಸುದ್ದಿಯ ಮೇಲೆ ಸಂಶಯವೂ ಉಂಟಾಗುತ್ತಿತ್ತು. ಅವರ ಗುರು ಆ ಸುದ್ದಿಗಳಿಗೆ ಮಹತ್ವ ಕೊಡುತ್ತಿದ್ದಿಲ್ಲ. ಆದುದರಿಂದ ಇವ ರಿಬ್ಬರೂ ಆ ವಿಷಯವನ್ನೆತ್ತುತ್ತಿದ್ದಿಲ್ಲ. "ಈ ಬುದ್ಧ ಮೊದಲು ಸನ್ಯಾಸಿಯಾ ಗಿದ್ದ ಮತ್ತು ಕಾಡಿನಲ್ಲಿದ್ದ. ಆದರೆ ಆ ಮೇಲೆ ಅದನ್ನೆಲ್ಲ ತೊರೆದು ಶ್ರೀಮಂತಿ ಕೆಯ ಜೀವನವನ್ನು ಆರಂಭಿಸಿರುವನು. ಪ್ರಾಪಂಚಿಕ ಸುಖ ವಿಲಾಸಗಳಲ್ಲಿ ಮಗ್ನನಾಗಿರುವನು" ಎಂದು ಆ ಗುರುವಿನ ಕಿವಿಯನ್ನು ಯಾರೋ ಊದಿ ದ್ದರು. ಆದುದರಿಂದ ಬುದ್ಧನ ಮೇಲೆ ಅವನಿಗೆ ಪ್ರೀತಿ ಇರಲಿಲ್ಲ.

ಒಂದು ದಿನ ಗೋವಿಂದ ಹೀಗೆಂದ: "ಸಿದ್ಧಾರ್ಥ! ಈ ದಿನ ನಾನು ಒಂದು ಗ್ರಾಮಕ್ಕೆ ಹೋಗಿದ್ದೆ. ಅಲ್ಲಿ ಒಬ್ಬ ಬ್ರಾಹ್ಮಣನು ನನ್ನನ್ನು ಅತಿಥಿ ಯಾಗಿ ಆಮಂತ್ರಿಸಿದುದರಿಂದ ಅವನ ಮನೆಗೆ ತೆರಳಿದೆ. ಆ ಬ್ರಾಹ್ಮಣನ

ಮನೆಯಲ್ಲಿ ಮಗಧದಿಂದ ಬಂದ ಬ್ರಾಹ್ಮಣಪುತ್ರನೊಬ್ಬನಿದ್ದ. ಈ ಯುವಕನು ಬುದ್ಧನನ್ನು ಕಂಡಿರುವನಂತೆ. ಅವನ ಬೋಧಾಮೃತವನ್ನು ಆಲಿಸಿರುವನಂತೆ! ಅವನಾಡುವ ಮಾತುಗಳನ್ನು ಕೇಳಿ ಆ ಪುರುಷೋತ್ತಮನನ್ನು ನಾನೂ ನೀನೂ ಎಂದು ಕಂಡೇವು ಮತ್ತು ಎಂದು ಅವನ ಅಮೃತ ವಾಣಿಗಳನ್ನು ಕೇಳಿಯೇವು ಎಂದು ನಾನೂ ತವಕಿಸಿದೆ. ಮಿತ್ರಾ! ನಾವೂ ಅಲ್ಲಿಗೆ ತೆರಳಿ ಬುದ್ಧನ ಬಾಯಿಂದಲೇ ಅವನ ಬೋಧೆಯನ್ನು ಕೇಳುವುದು ಬೇಡವೇ ?"

ಅದಕ್ಕೆ ಸಿದ್ಧಾರ್ಥನೆಂದ: "ಹೇಗೋ? ಗೋವಿಂದನೆಂದೂ ಈ ಸನ್ಯಾಸಿಗಳನ್ನಗಲಿ ಹೋಗಲಾರನೆಂದು ನಾನು ಭಾವಿಸಿದ್ದೆ. ಈ ಸನ್ಯಾಸಿಗಳು ಕಲಿಸುವ ವಿದ್ಯಾಭ್ಯಾಸದಲ್ಲೇ ನಿರತನಾಗಿ ಮುಪ್ಪು ಮುದುಕನಾಗಲು ಬಯಸುವನೆಂದು ನಂಬಿದ್ದೆ. ನನ್ನ ತಿಳುವಳಿಕೆ ತಪ್ಪಾಯಿತು, ಗೋವಿಂದನ ನಿಜ ಸ್ವರೂಪಜ್ಞಾನ ನನಗೆ ಸಂಪೂರ್ಣ ಆಗಿಲ್ಲ! ಅವನ ಹೃದಯದಲ್ಲೇನಿದೆಯೆಂದೂ ಪೂರ್ಣ ಗೊತ್ತಾಗಲಿಲ್ಲ. ಅಂತೂ ಈಗ ನೀನು ಹೊಸ ಹಾದಿಯೊಂದನ್ನು ತುಳಿಯಲು ಇಚ್ಛಿಸುತಿದ್ದೀ! ಬುದ್ಧನ ತತ್ತ್ವೋಪದೇಶ ಕೇಳಲು ನಿನ್ನ ಆಶೆ!"

ಗೋವಿಂದ ನುಡಿದ: "ನನ್ನನ್ನು ಅಪಹಾಸ್ಯಮಾಡುವುದೆಂದರೆ ನಿನಗೆ ಬಹಳ ಇಷ್ಟವೆಂದಂತೆ ತೋರುತ್ತದೆ. ಮಿತ್ರಾ! ಅದಕ್ಕಾಗಿ ನಾನು ಚಿಂತಿಸುವುದಿಲ್ಲ. ಅವನನ್ನು ಕಾಣುವ ಹಾಗೂ ಅವನ ಉಪದೇಶ ಕೇಳುವ ಲವಲವಿಕೆ ನಿನ್ನಲ್ಲಿಯೂ ಇಲ್ಲವೇ? ಈ ಸನ್ಯಾಸಿಗಳ ದಾರಿಯಲ್ಲಿ ನಡೆಯಲಾರೆನೆಂದು ಹಿಂದೊಮ್ಮೆ ನೀನು ನನ್ನೊಡನೆ ಹೇಳಿರಲಿಲ್ಲವೇ ?"

ಗೆಳೆಯನ ಮಾತು ಕೇಳಿ ಸಿದ್ಧಾರ್ಥ ನಕ್ಕ. ಆದರೆ ಅವನ ನಗುವಿನಲ್ಲಿ ಅಪಹಾಸ್ಯವೂ ದುಃಖವೂ ಬೆರೆತಿತ್ತು. ಕ್ಷಣ ಹೊತ್ತಿನ ಮೇಲೆ ಅವನು ಹೇಳಿದ : "ಗೋವಿಂದಾ! ನಿನ್ನ ಮಾತು ನಿಜ. ನಾನು ಹಿಂದೊಮ್ಮೆ ಹೇಳಿದುದು ನಿನ್ನ ಸ್ಮರಣೆಯಲ್ಲಿದೆ. ಆದರೆ ನಾನು ಆಡಿದ್ದ ಇನ್ನಿತರ ವಿಷಯಗಳನ್ನೂ ನೀನು ನೆನಪು ಮಾಡಿಕೊಳ್ಳುವುದು ಒಳ್ಳೇದು. ಪರೋಪದೇಶ ಪಾಂಡಿತ್ಯ ಹಾಗೂ ಗುರುಬೋಧೆಗಳ ಮೇಲೆ ನನಗೆ ನಂಬಿಗೆಯೂ ಇಲ್ಲ. ಶ್ರದ್ಧೆಯೂ ಇಲ್ಲ ಎಂದು ಸ್ಪಷ್ಟಪಡಿಸಿದ್ದೆ. ಮಿತ್ರಾ! ಅದು ಏನೇ ಇರಲಿ

ಆ ನೂತನ ತತ್ವೋಪದೇಶವನ್ನು ಕೇಳಲು ನಾನು ಸಿದ್ಧ. ನಾವು ಆ ಸವಿ ಫಲವನ್ನು ಈಗಾಗಲೇ ಸವಿದಿರುವೆವೆಂದು ನನ್ನ ನಂಬಿಗೆಯಾಗಿದೆ."

ಗೋವಿಂದನ ಸಂತಸಕ್ಕೆ ಪಾರವಿಲ್ಲ. "ನೀನು ಒಪ್ಪಿಕೊಂಡುದು ನನಗೆ ಸಂತೋಷಕರ. ಆದರೆ ಕೇಳುವ ಮೊದಲೇ ಗೌತಮನ ತತ್ವವು ನಮಗೆ ಅಮೂಲ್ಯ ಫಲವನ್ನಿತ್ತಿದೆಯೆಂದು ಹೇಳಿದೆಯಲ್ಲ! ಇದುಹೇಗೆ?" ಎಂದು ಪ್ರಶ್ನಿಸಿದ.

"ನಮ್ಮನ್ನು ಈ ಸನ್ಯಾಸಿಗಳಿಂದ ಆತನು ಬಿಡಿಸಿ ತನ್ನೆಡೆಗೆ ಎಳೆದು ಕೊಂಡ. ಇದೇ ನಾವು ಗಳಿಸಿದ ಫಲ. ಅದಕ್ಕಾಗಿ ನಾವು ಗೌತಮನಿಗೆ ಋಣಿಗಳು. ಇದಕ್ಕಿಂತಲೂ ಬೇರೆ ಪರಮೋತ್ಕೃಷ್ಟ ಹಣ್ಣುಗಳಿವೆಯೋ ಏನೋ ನಿರೀಕ್ಷಿಸೋಣ"!

ಅದೇ ದಿನ ಸಿದ್ಧಾರ್ಥ ತಮ್ಮ ನಿರ್ಧಾರವನ್ನು ಗುರುವಿಗೆ ತಿಳಿಸಿದ. ತರುಣರು ಹಾಗೂ ಶಿಷ್ಯರಿಗೆ ಒಪ್ಪುವಂತೆ ನಯವಿನಯದಿಂದಲೇ ಆ ಮುದುಕ ಸನ್ಯಾಸಿಯೊಡನೆ ಮಾತನಾಡಿದ. ಆದರೆ ಇಬ್ಬರೂ ತರುಣರು ತನ್ನನ್ನು ಬಿಟ್ಟು ತೆರಳಲು ನಿರ್ಣಯಿಸಿದುದನ್ನು ಕೇಳಿ ಆ ಮುದುಕನಿಗೆ ಕೋಪ ಉಕ್ಕಿತು. ಅವರನ್ನು ಗಟ್ಟಿಯಾಗಿ ಗದರಿಸಿದ.

ಗೋವಿಂದ ಬೆಪ್ಪುಬೆರಗಾದ. ಆದರೆ ಸಿದ್ಧಾರ್ಥ ಅವನ ಕಿವಿಯಲ್ಲಿ ಪಿಸುಗುಟ್ಟಿದ. "ಈಗ ನೋಡು. ಅವನಿಂದ ನಾನು ಏನು ಕಲಿತಿರುವೆನೆಂಬುದನ್ನು ಅವನಿಗೇ ತೋರಿಸುತ್ತೇನೆ."

ಆ ಮೇಲೆ ಸಿದ್ಧಾರ್ಥ ಆ ಮುದುಕ ಸನ್ಯಾಸಿಯ ಮುಂದೆ ಅಚಲ ನಿರ್ಧಾರದಿಂದ ನಿಂತ. ಮುದುಕನನ್ನೇ ದಿಟ್ಟಿಸಿದ. ನೋಟದಿಂದ ಅವನನ್ನು ಬಿಗಿದ. ತನ್ನ ನೇತ್ರಶಕ್ತಿಯಿಂದ ಸುಷುಪ್ತಿಗೆ ತಂದ. ಮುದುಕನ ಮನೋಬಲವನ್ನು ಜಯಿಸಿದ. ಮುದುಕ ಮೆತ್ತಗಾಗುವಂತೆ ಮಾಡಿದ. ತಾನು ಹೇಳಿದಂತೆ ಮಾಡಲು ಆಜ್ಞಾಪಿಸಿದ. ಮುದುಕನು ಶಾಂತನಾದ. ಅವನ ಮನೋಬಲ ಕುಗ್ಗಿತು ಕೈಗಳು ಕೆಳಗೆ ಜೋತುವು. ಸಿದ್ಧಾರ್ಥನ ಮಾಟದ ಮುಂದೆ ಅವನ ಆಟ ನಡೆಯಲಿಲ್ಲ. ಸಿದ್ಧಾರ್ಥನ ವಿಚಾರಗಳು ಅವನ ವಿಚಾರಗಳನ್ನು ಗೆದ್ದುವು. ಸಿದ್ಧಾರ್ಥ ಹೇಳಿದಂತೆ ನಡೆಯದೆ ಗತ್ಯಂತರವಿಲ್ಲ. ಹೀಗಾಗಿ ಆ ಮುದುಕನು ಸಿದ್ಧಾರ್ಥನಿಗೇ ವಂದಿಸಿ, ಸುಖಪಯಣ ಹಾರೈಸಿ, ಹರಸಿದ.

ಆದರಿಂದ ಈ ತರುಣರಿಬ್ಬರಿಗೂ ಸಂತೋಷವಾಯಿತು. ಅವನ ಹರಕೆ ಹಾರೈಕೆಗಳಿಗೆ ಕೃತಜ್ಞತೆ ಸೂಚಿಸಿ, ಪ್ರತಿವಂದಿಸಿ ಹೊರಟು ಹೋದರು.

ಮಾರ್ಗ ಮಧ್ಯೆ ಗೋವಿಂದ ಹೇಳಿದ: "ಸಿದ್ಧಾರ್ಥ! ನೀನು ಸನ್ಯಾಸಿಗಳಿಂದ ಇಷ್ಟು ವಿದ್ಯೆ ಗ್ರಹಿಸಿದೆಯೆಂದು ನನಗೆ ಗೊತ್ತೇ ಇರಲಿಲ್ಲ. ಮುದುಕನಾದ ಸನ್ಯಾಸಿಯನ್ನು ಮಂತ್ರಮುಗ್ಧಗೊಳಿಸುವದು ಬಹಳ ಕಠಿನ. ನೀನು ಅಲ್ಲೇ ಇರುತ್ತಿದ್ದರೆ ನೀರಿನ ಮೇಲೆ ನಡೆದು ಹೋಗಲೂ ಕಲಿಯುತಿದ್ದೆ".

"ನೀರ ಮೇಲೆ ನಡೆವ ಇಚ್ಛೆಯೇ ನನಗಿಲ್ಲ. ಅಂತಹ ಕಲೆಗಳೆಲ್ಲ ಆ ವೃದ್ಧ ಸನ್ಯಾಸಿಗಳಿಗೇ ಇರಲಿ" ಎಂದು ಸಿದ್ಧಾರ್ಥ ಉತ್ತರವಿತ್ತ.

## ೩ ನೆಯ ಅಧ್ಯಾಯ

ಸವತಿ ನಗರದ ಪ್ರತಿಯೊಂದು ಮಗುವಿಗೂ ಪ್ರಸಿದ್ಧನಾದ ಬುದ್ಧನ ಹೆಸರು ಗೊತ್ತಿತ್ತು. ಭಿಕ್ಷೆ ಬೇಡುವ ಗೌತಮನ ಶಿಷ್ಯರ ಪಾತ್ರೆಗಳನ್ನು ತುಂಬಲು ಎಲ್ಲರೂ ಸಿದ್ಧರು. ನಗರದ ಸಮೀಪ ಇದ್ದ ಜೇತವನವು ಅವನ ವಾಸಸ್ಥಳ. ಈ ಮಹಾತ್ಮನ ಪರಮಭಕ್ತನಾದ ಅನಂತ ಪಿಂಡಿಕನೆಂಬ ವರ್ತಕನು ಗೌತಮನಿಗೂ ಅವನ ಶಿಷ್ಯರಿಗೂ ತನ್ನ ಈ ತೋಟವನ್ನು ಕಾಣಿಕೆಯಾಗಿ ಅರ್ಪಿಸಿದ್ದನು.

ಆ ಇಬ್ಬರು ಸನ್ಯಾಸಿಗಳೂ ಗೌತಮನ ವಾಸಸ್ಥಾನವನ್ನು ಹುಡುಕುತ್ತ ಹುಡುಕುತ್ತ ಬಂದರು. ಅವರಿವರು ಹೇಳಿದ ಕತೆಗಳ ಮೇಲಿಂದ ಆ ಜಿಲ್ಲೆ ಸೇರಿದರು. ಕೇಳುತ್ತ ಕೇಳುತ್ತ ಸವತಿ ನಗರ ಸೇರಿದರು. ಸವತಿ ಪಟ್ಟಣಕ್ಕೆ ಪ್ರವೇಶಿಸಿದ ಮೇಲೆ ಅವರು ಇದಿರಾದ ಮೊದಲನೆ ಮನೆಯ ಮುಂದೆ ಭಿಕ್ಷೆಗಾಗಿ ನಿಂತರು. ಆ ಮನೆಯ ಯಜಮಾನಿನಿ ಸಂತೋಷದಿಂದಲೇ ಆಹಾರ ವಸ್ತುಗಳನ್ನು ನೀಡಿದಳು. ಸಿದ್ಧಾರ್ಥನು ಆ ಸ್ತ್ರೀಯನ್ನುದ್ದೇಶಿಸಿ ಕೇಳಿದ: "ಅಮ್ಮಾ! ಪ್ರಖ್ಯಾತನಾದ ಬುದ್ಧನಿರುವ ಸ್ಥಳ ಯಾವುದೆಂದು ತಿಳಿಯಲು ಬಯಸುತ್ತೇವೆ. ನಾವಿಬ್ಬರೂ ಕಾಡಿನಿಂದ ಬಂದ ಸನ್ಯಾಸಿಗಳು. ಆ ಸರ್ವಗುಣ ಸಂಪನ್ನನನ್ನು ಕಾಣಲು ಬಂದಿದ್ದೇವೆ. ಅವನ ತತ್ವೋಪದೇಶವನ್ನು ಕೇಳಲೂ ನಮ್ಮ ಆಶೆ."

"ನೀವು ಯೋಗ್ಯ ಸ್ಥಳಕ್ಕೆ ಬಂದಿರುವಿರಿ. ಅನಂತ ಪಿಂಡಿಕನ ರಮಣೀಯವಾದ ಜೇತವನವೆಂಬ ಉದ್ಯಾನವನದಲ್ಲಿ ಆ ಮಹಾನುಭಾವನಿದ್ದಾನೆ. ಯಾತ್ರಿಕರಾದ ನೀವು ರಾತ್ರಿ ಅಲ್ಲೇ ವಿಶ್ರಮಿಸಬಹುದು. ಏಕೆಂದರೆ ಅವನ ದಿವ್ಯವಾಣಿಯನ್ನು ಕೇಳಲು ತಂಡೋಪತಂಡವಾಗಿ ಬರುತ್ತಿರುವ ಜನರೆಲ್ಲರಿಗೂ ಉಳಿದುಕೊಳ್ಳಲು ಆ ವನದಲ್ಲಿ ಸಾಕಷ್ಟು ಸ್ಥಳವಿದೆ." ಎಂದು ಆ ಸ್ತ್ರೀ ಹೇಳಿದಳು.

ಅವಳ ಮಾತು ಕೇಳಿ ಗೋವಿಂದನಿಗೆ ಅತ್ಯಾನಂದವಾಯಿತು. "ಒಳ್ಳೇದಾಯಿತು. ನಾವು ನಮ್ಮ ಗುರಿ ಮುಟ್ಟಿದೆವು. ನಮ್ಮ ಯಾತ್ರೆ ಮುಗಿದಂತಾಯಿತು. ತಾಯೀ! ಈ ಬುದ್ಧನ ವಿಷಯ ನಿನಗೇನಾದರೂ ಗೊತ್ತಿದೆಯೇ? ನೀನು ಅವನನ್ನು ಕಂಡಿರುವೆಯಾ?" ಎಂದು ಹಿಗ್ಗುತ್ತ ಪ್ರಶ್ನಿಸಿದನು.

"ಆ ಮಾನವ ಶ್ರೇಷ್ಠನನ್ನು ನಾನು ಅನೇಕ ಸಲ ನೋಡಿರುತ್ತೇನೆ. ಒಂದೊಂದು ದಿನ ಅವನು ಕಾವಿಶಾಟಿ ಹೊದೆದು, ರಸ್ತೆಗಳಲ್ಲಿ ನಡೆಯುತ್ತ, ಮನೆಗಳ ಮುಂದೆ ಭಿಕ್ಷಾಪಾತ್ರೆ ಹಿಡಿದು ನಿಂತಿರುವುದನ್ನೂ ಪಾತ್ರೆ ತುಂಬಿದ ಮೇಲೆ ಹಿಂತಿರುಗುವುದನ್ನೂ ನಾನು ನೋಡಿರುತ್ತೇನೆ" ಎಂದವಳು ಉತ್ತರ ಕೊಟ್ಟಳು.

ಗೋವಿಂದ ಆ ಮಾತುಗಳಿಂದಲೇ ಮೋಹಿತನಾದ. ಇನ್ನೂ ಅನೇಕ ಪ್ರಶ್ನೆಗಳನ್ನು ಕೇಳಲು ಮತ್ತು ಇನ್ನೂ ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳಲು ಅವನ ಹಂಬಲ. ಆದರೆ ವೇಳೆಯಾಯಿತೆಂದು ಸಿದ್ಧಾರ್ಥ ಉಚ್ಚರಿಸಿದ. ಅವರು ಆ ಮಾನಿನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಹೋದರು. ಅವರು ದಾರಿ ಕೇಳಬೇಕಾಗಿಯೇ ಇರಲಿಲ್ಲ. ಏಕೆಂದರೆ ಅನೇಕ ಯಾತ್ರಿಕರೂ ಗೌತಮನ ಅನುಯಾಯಿಗಳೂ ಜೇತವನದ ದಾರಿ ಹಿಡಿದು ಹೋಗುತಿದ್ದರು. ಅವರು ಆ ವನ ಸೇರಿದಾಗ ರಾತ್ರಿಯಾಯ್ತು. ಆ ರಾತ್ರಿಯಲ್ಲೂ ಜನ ಯಾತ್ರೆ ಬರುತ್ತಲೇ ಇತ್ತು. ಆಗಾಗ ಜನರ ಗದ್ದಲವೂ ಕೇಳಿ ಬರುತಿತ್ತು. ಅರಣ್ಯಜೀವನ ನಡೆಸಿದ ಈ ಇಬ್ಬರು ಸನ್ಯಾಸಿಗಳಿಗೆ ಆಶ್ರಯ ದೊರೆಯುವುದು ಕಷ್ಟವಾಗಿರಲಿಲ್ಲ. ಅವರು ಬೇಗನೇ ಆಶ್ರಯ ಹುಡುಕಿ ಮುಂಜಾನೆಯ ವರೆಗೆ ಅಲ್ಲಿ ತಂಗಿದರು.

ಸೂರ್ಯೋದಯವಾದೊಡನೆಯೇ, ಅದೇ ತೋಟದಲ್ಲಿ ರಾತ್ರಿಯನ್ನು

ಕಳೆದಿದ್ದ ಅಸಂಖ್ಯಾತ ಭಕ್ತರನ್ನೂ ಕುತೂಹಲಿಗಳಾದ ಪ್ರೇಕ್ಷಕರನ್ನೂ ಕಂಡು ಇವರಿಬ್ಬರೂ ಅಚ್ಚರಿಪಟ್ಟರು. ಆ ಮನೋಹರವಾದ ದೊಡ್ಡ ತೋಪಿನ ನಾನಾ ದಾರಿಗಳಲ್ಲಿ ಕಾವಿಧಾರಿಗಳಾದ ಭಿಕ್ಷುಗಳು ಅತ್ತಿಂದಿತ್ತ ತಿರುಗುತಿದ್ದರು. ಇಲ್ಲಿ ಅಲ್ಲಿ ಅನೇಕರು ಮರಗಳ ಕೆಳಗೆ ಕುಳಿತು ಧ್ಯಾನಾಸಕ್ತರಾಗಿದ್ದರು. ಕೆಲವರು ಮರಗಳ ನೆರಳಲ್ಲಿ ಕೂತು ಗಟ್ಟಿಯಾಗಿ ಮಾತನಾಡುತಿದ್ದರು. ನೆರಳಿನ ಆ ತಂಪು ತೋಟವು ಮುಕ್ಕುರುವ ಜೇನ್ನೊಣಗಳ ನಗರದಂತೆ ಕಂಗೊಳಿಸುತಿತ್ತು. ಮಧ್ಯಾಹ್ನದ ಊಟಕ್ಕಾಗಿ ಆಹಾರ ಒದಗಿಸಲು ಹೆಚ್ಚಿನ ಸನ್ಯಾಸಿಗಳು ಭಿಕ್ಷಾಪಾತ್ರೆ ಹಿಡಿದುಕೊಂಡು ಹೊರಟರು. ದಿನಕ್ಕೆ ಅವರೆಲ್ಲರೂ ಒಪ್ಪತ್ತು ಮಾತ್ರ ಆಹಾರ ಸ್ವೀಕರಿಸುತಿದ್ದರು. ಬುದ್ಧನು ಕೂಡಾ ಮುಂಜಾನೆ ಭಿಕ್ಷೆ ಬೇಡುತಿದ್ದ.

ಸಿದ್ಧಾರ್ಥ ಅವನನ್ನು ನೋಡಿದ. ತಕ್ಷಣವೇ ಅವನಿಗೆ ಗುರುತು ಹತ್ತಿತು. ದೇವತೆಗಳೇ ಬೊಟ್ಟುಮಾಡಿ ತೋರಿಸಿದಂತೆ.! ಕೈಯಲ್ಲಿ ಭಿಕ್ಷಾಪಾತ್ರೆ ಹಿಡಿದುಕೊಂಡು ಸದ್ದಿಲ್ಲದೆ ಹೊರಟುದುದನ್ನು ಕಂಡ. ಕಾವಿ ಶಾಟಿ ಹೊದೆದ ಅವನು ಬಹಳ ನಿಗರ್ವಿಯೆಂದೂ ಸಿದ್ಧಾರ್ಥನಿಗೆ ಅನಿಸಿತು.

ಸಿದ್ಧಾರ್ಥ ಗೋವಿಂದನನ್ನು ಕರೆದು "ಅದೋ ಅಲ್ಲಿನೋಡು! ಅವನೇ ಬುದ್ಧ!" ಎಂದು ಕೈತೋರಿಸಿ ಮೆಲ್ಲಗೆ ನುಡಿದ.

ಕುಂಚಿಗೆ ಧರಿಸಿದ ಭಿಕ್ಷುವನ್ನು ಗೋವಿಂದ ನೆಟ್ಟದೃಷ್ಟಿಯಿಂದ ನೋಡಿದ. ಇನ್ನಿತರ ನೂರಾರು ಸನ್ಯಾಸಿಗಳಿಂತ ಅವನು ಭಿನ್ನನಾಗಿದ್ದಿಲ್ಲ. ನಿಜ. ಆದರೂ ಗೋವಿಂದ ಅವನನ್ನು ಗುರುತಿಸಿದ. ಹೌದು. ಅವನೇ.! ಆದುದರಿಂದ ಅವರಿಬ್ಬರೂ ಅವನ ಹಿಂದೆ ಹೊರಟರು. ಅವನನ್ನೇ ನಿರೀಕ್ಷಿಸ ತೊಡಗಿದರು.

ಬುದ್ಧ ವಿಚಾರ ಮಗ್ನನಾಗಿ ತನ್ನ ದಾರಿ ಹಿಡಿದು ಶಾಂತವಾಗಿ ನಡೆದು ಹೋದ. ಅವನ ಶಾಂತ ಮುಖಮುದ್ರೆಯಲ್ಲಿ ಸುಖವೂ ಇರಲಿಲ್ಲ. ದುಃಖವೂ ಇರಲಿಲ್ಲ. ಅವನು ತನ್ನೊಳಗೇ ಮೃದು ಮಂದಹಾಸ ಬೀರುತ್ತಿದ್ದ. ಆರೋಗ್ಯ ಭಾಗ್ಯದಿಂದ ನಲಿವ ಮಗುವಿನಂತಹ ನಗೆ ಅವನ ಮೊಗದಾವರೆಯಲ್ಲಿ ಕುಣಿಯುತ್ತಿತ್ತು. ಇನ್ನಿತರ ಸನ್ಯಾಸಿಗಳಂತೆ ನಿಲುವಂಗಿ ತೊಟ್ಟು ಅವರಂತೆಯೇ ನಡೆಯುತಿದ್ದ. ಆದರೆ ಅವನ ಮುಖ, ನಡಿಗೆ, ಕೆಳಗೆ

ನೋಡುತಿದ್ದ ಶಾಂತ ಕೃಪಾಕಟಾಕ್ಷ, ಕೆಳಗೆ ತೂಗುತಿದ್ದ ನಿರುಪದ್ರವಿ ಕೈಗಳು, ಕೈಯ ಪ್ರತಿಯೊಂದು ಬೆರಳು, ಶಾಂತಿ ಬೀರುತ್ತಿದ್ದುವು. ಮತ್ತು ಸಂಪೂರ್ಣತೆಯ ದ್ಯೋತಕಗಳಾಗಿದ್ದುವು. ಅಲ್ಲಿ ಯಾವ ಆಶೆಯೂ ಇರಲಿಲ್ಲ. ಯಾವುದರ ಅನುಕರಣವೂ ಇರಲಿಲ್ಲ. ಅಳಿಯದ ಶಾಂತಿಯನ್ನು ಪ್ರತಿಬಿಂಬಿಸುತಿದ್ದುವು. ನಂದಿಹೋಗದ ಬೆಳಕು ಅದು! ಅದೊಂದು ಅಬೇಧ್ಯ ಶಾಂತಿಯ ಕೋಟೆಯೇ ಸರಿ.!

ಈ ರೀತಿ ಗೌತಮ ಭಿಕ್ಷೆಗಾಗಿ ನಗರಕ್ಕೆ ಅಲೆದ. ಅವನ ಆ ಪರಿಪೂರ್ಣ ಶಾಂತಮುಖಭಾವ, ಶಾಂತಸ್ವರೂಪಗಳಿಂದಲೇ ಈ ಸನ್ಯಾಸಿಗಳು ಗೊತ್ತುಹಚ್ಚಿದ್ದರು. ಬುದ್ಧನಲ್ಲಿ ನಿರಹಂಕಾರ, ನಿರ್ವಂಚನೆ, ನಿಷ್ಕಾಮಗಳನ್ನೇ ಅವರು ಕಂಡರು. ಅಲ್ಲಿ ಶಾಂತಿ ಮತ್ತು ಬೆಳಕು ಎರಡೇ ಇದ್ದುವು.

"ಈ ದಿನವೇ ನಾವು ಅವನ ತತ್ವೋಪದೇಶವನ್ನು ಕೇಳೋಣ" ಎಂದು ಗೋವಿಂದ ನುಡಿದ.

ಸಿದ್ಧಾರ್ಥನು ಅದಕ್ಕೆ ಉತ್ತರ ಕೊಡಲಿಲ್ಲ. ತತ್ವೋಪದೇಶದ ಕಡೆ ಅವನ ಕುತೂಹಲ ಕೆರಳಿದ್ದಿಲ್ಲ. ಅದರಿಂದ ತಾನು ಹೊಸತೇನನ್ನೂ ಕಲಿತುಕೊಳ್ಳಲಿಕ್ಕಿಲ್ಲ ಎಂದವನ ಮತ. ಗೋವಿಂದನೂ ಅವನೂ ಇಷ್ಟರೊಳಗಾಗಿಯೇ ಬುದ್ಧನ ಉಪದೇಶದ ಸಾರಾಂಶವನ್ನು ಜನರ ಬಾಯಿಂದ ಕೇಳಿರುವರು. ಆದರೆ ಗೌತಮನ ತಲೆ, ಅವನ ಭುಜಗಳು, ಪಾದಗಳು, ಆಜಾನುಬಾಹುಗಳು ಹಾಗೂ ಅವನ ಶಾಂತ ಸ್ವಭಾವ ಇವುಗಳನ್ನು ಸಿದ್ಧಾರ್ಥನು ಮತ್ತೆ ಮತ್ತೆ ನೋಡಿದ. ಗೌತಮನ ಕೈ ಬೆರಳಿನ ಪ್ರತಿಯೊಂದು ಗಂಟುಗಳಲ್ಲಿಯೂ ಜ್ಞಾನವಿದೆಯೆಂದು ಅವನಿಗೆ ಅನ್ನಿಸಿತು. ಅವು ಮಾತನಾಡುತ್ತಿವೆ; ಉಸಿರಾಡಿಸುತ್ತಿವೆ; ಸತ್ಯಬೀರುತ್ತಿವೆಯೆಂದು ಅವನು ಕಂಡುಕೊಂಡ. ಈ ಮನುಷ್ಯ, ಈ ಬುದ್ಧ, ನಿಜವಾಗಿಯೂ ನಖಶಿಖಾಂತ ಪರಮ ಪರಿಶುದ್ಧನಾದ ಮಹಾತ್ಮ.! ಗೌತಮನ ಮೇಲೆ ಸಿದ್ಧಾರ್ಥನಿಗೆ ಬಹಳ ಗೌರವವುಂಟಾಯಿತು. ಯಾವ ಮನುಷ್ಯನನ್ನೂ ಅವನು ಇಷ್ಟರವರೆಗೆ ಇಷ್ಟು ಆದರದಿಂದ ಕಂಡಿರಲಿಲ್ಲ. ಅಷ್ಟೇ ಏಕೆ, ಅಷ್ಟು ಪ್ರೇಮಿಸಿರಲಿಲ್ಲ.

ಇಬ್ಬರೂ ನಗರದ ವರೆಗೂ ಬುದ್ಧನನ್ನು ಹಿಂಬಾಲಿಸಿದರು. ಮತ್ತು ಮೌನವಾಗಿ ಅವನ ಹಿಂದೆಯೇ ಮರಳಿದರು. ಅವರೇ ಸ್ವಯಂಪ್ರೇರಣೆ

ಯಿಂದ ಅಂದು ಉಪವಾಸ ಮಾಡಿದರು. ಗೌತಮನು ತನ್ನ ಶಿಷ್ಯರ ಮಧ್ಯೆ ಕುಳಿತು ಊಟಮಾಡುವುದನ್ನು ಕಂಡರು. ಅವನ ಆಹಾರ ಒಂದು ಹಕ್ಕಿಗೂ ಸಾಲುವಷ್ಟಿರಲಿಲ್ಲ. ಆ ಮೇಲೆ ಗೌತಮನು ಒಂದು ಮಾವಿನ ಮರದ ನೆರಳಲ್ಲಿ ವಿಶ್ರಮಿಸಿಕೊಂಡ.

ಸಂಜೆ ಬಿಸಿಲಿನ ಸೆಖೆ ಕಡಿಮೆಯಾದ ಮೇಲೆ ಮತ್ತು ಎಲ್ಲರೂ ಬುದ್ಧನ ಮುಂದೆ ಗುಂಪುಗೂಡಿ ನಿಗುರಿ ನಿಂತ ಮೇಲೆ ಬುದ್ಧನು ಧರ್ಮೋಪದೇಶ ಆರಂಭಿಸಿದ. ಅವನ ವಾಣಿಯನ್ನು ಅವರು ಆಲಿಸಿದರು. ಅದು ಪರಿಪೂರ್ಣ, ಮಧುರ ಹಾಗೂ ಶಾಂತಿಯಿಂದ ತುಂಬಿ ತುಳುಕುತ್ತಿತ್ತು. ದು:ಖದ ಬಗ್ಗೆ ಗೌತಮನು ಮಾತಾಡಿದ. ದುಃಖದ ಮೂಲವನ್ನೂ ದುಃಖದಿಂದ ವಿಮೋಚನೆ ಹೊಂದುವ ಮಾರ್ಗವನ್ನೂ ವಿವರಿಸಿದ. ಜೀವನದವಲ್ಲಿ ನೋವೇ ಬಹಳ. ಜಗತ್ತಿನಲ್ಲಿ ದುಃಖ ತುಂಬಿದೆ. ನಿಜ ಆದರೆ ಅದರಿಂದ ವಿಮೋಚನೆ ಹೊಂದುವ ಪಥವನ್ನು ಹುಡುಕಲಾಗಿದೆ. ಬುದ್ಧನ ದಾರಿ ಅನುಸರಿಸಿದವರಿಗೆ ವಿಮೋಚನೆಯಿದೆ.

ಆ ಪುಣ್ಯ ಪುರುಷನು ಮೃದು ಮಧುರವಾಗಿ ನುಡಿದ. ಆದರೆ ಆ ವಾಣಿಯು ಸ್ಥಿರವಾಗಿತ್ತು. ನಾಲ್ಕು ಸೂತ್ರಗಳನ್ನು ಹೇಳಿದ. ಅಷ್ಟಪಥಗಳನ್ನು ತೋರಿದ. ಕತೆ, ಉಪಮೆ, ಉದಾಹರಣೆಗಳಿಂದ ಬೋಧನಾ ಪದ್ಧತಿಯನ್ನು ಬೋಧಿಸಿದ. ಅವನ ಶಾಂತ, ನಿರ್ಮಲ, ಮೃದು ಮಾತು ಅವರೆಲ್ಲರ ಹೃದಯ ಮುಟ್ಟಿತು. ಅದು ಆಕಾಶಲೋಕದಲ್ಲಿರುವ ತಾರೆಯಂತೆ ದೈದೀಪ್ಯಮಾನವಾಗಿತ್ತು.

ಬುದ್ಧನ ಉಪದೇಶ ಮುಗಿದಾಗ ರಾತ್ರಿಯಾಗಿತ್ತು. ಅನೇಕ ಯಾತ್ರಿಕರು ಮುಂದೆ ಬಂದು ತಮ್ಮನ್ನು ಆ ಸಮಾಜವಲ್ಲಿ ಸೇರಿಸಿಕೊಳ್ಳಬೇಕೆಂದು ಬಿನ್ನವಿಸಿಕೊಂಡರು. ಬುದ್ಧನು ಅವರನ್ನು ಅಂಗೀಕರಿಸಿ, ನುಡಿದ : "ನೀವು ಚೆನ್ನಾಗಿ ಕೇಳಿದಿರಿ. ಸಾರ್ಥಕವಾಯಿತು. ನಮ್ಮೊಡನೆ ಕೂಡಿಕೊಳ್ಳಿರಿ ಮತ್ತು ಆನಂದ ಹೊಂದಿರಿ. ದುಃಖವನ್ನು ಕೊನೆಗಾಣಿಸಿರಿ "

ಸಂಕೋಚ ಪಡುವ ಗೋವಿಂದನೂ ಮುಂದೆ ಹೋಗಿ, " ನಾನು ಕೂಡಾ ಈ ಕೀರ್ತಿಶಾಲಿಯ ಶಿಷ್ಯನಾಗುವೆ. ಅವನ ತತ್ವಗಳಿಗೆ ನಿಷ್ಠನಾ

ಗುವೆ." ಎಂದು ಹೇಳಿದನು. ತನ್ನನ್ನು ಆ ಸಮಾಜವಲ್ಲಿ ಸ್ವೀಕರಿಸಬೇಕೆಂದು ಅವನು ಕೇಳಿಕೊಂಡ. ಮತ್ತು ಅದರಂತೆಯೇ ಆಯಿತು.

ಬುದ್ಧನು ಸಿದ್ಧಿಗಾಗಿ ಹೋದ ಮೇಲೆ ಗೋವಿಂದನು ಸಿದ್ಧಾರ್ಥನ ಕಡೆ ಹೊರಳಿ ಅತ್ಯಾತುರದಿಂದ ಹೇಳಿದ: "ಸಿದ್ಧಾರ್ಥ! ನಿನ್ನನ್ನು ನಾನು ನಿಂದಿಸುವವನಲ್ಲ. ನಾವಿಬ್ಬರೂ ಆ ಮಹಾತ್ಮನ ವಾಣಿಯನ್ನು ಕೇಳಿರು ವೆವು. ಅವನ ಅಮೃತ ತತ್ವಗಳನ್ನು ಆಲಿಸಿರುವೆವು. ಗೋವಿಂದನಿಗೆ ಅವು ಮಾನ್ಯವಾಗಿವೆ. ಆದರೆ ಮಿತ್ರಾ, ನೀನು ಕೂಡಾ ಈ ಮೋಕ್ಷಮಾರ್ಗವನ್ನು ಕಂಡುಹಿಡಿಯುವದಿಲ್ಲವೇ? ನಿನಗಿನ್ನೂ ತಡವೇ? ಇನ್ನೂ ದಾರಿ ನೋಡು ವೆಯಾ?"

ಗೋವಿಂದನ ಮಾತುಕೇಳಿ ನಿದ್ದೆಯಿಂದ ಎದ್ದವನಂತೆ ಎಚ್ಚರಗೊಂಡ. ಬಹಳ ಹೊತ್ತಿನವರೆಗೆ ಗೋವಿಂದನ ಮೋರೆಯನ್ನು ನೋಡಿದ. ಆಮೇಲೆ ಅವನು ಮೆಲ್ಲಗೆ ಮಾತನಾಡಿದ. ಸಿದ್ಧಾರ್ಥನ ಮಾತುಗಳಲ್ಲಿ ವ್ಯಂಗ್ಯಾರ್ಥ ವಿರಲಿಲ್ಲ. "ಮಿತ್ರಾ! ನೀನು ನಿಶ್ಚಯಿಸಿ ಆಯಿತು. ನೀನು ನಿನ್ನ ಪಥವನ್ನು ಆರಿಸಿಕೊಂಡಿರುತ್ತಿ. ನೀನು ಯಾವಾಗಲೂ ನನ್ನ ಗೆಳೆಯನಾಗಿದ್ದಿಯೇ. ಗೋವಿಂದಾ! ನೀನು ಯಾವಾಗಲೂ ನನ್ನ ಹಿಂದೆಯೇ ಇರುತ್ತಿದ್ದಿ. ಎಂದಾ ದರೂ ಗೋವಿಂದನು ತನ್ನ ಮನಸ್ಸಿಗೆ ಖಚಿತವೆನಿಸಿದ ಪಥವನ್ನು ಹಿಡಿಯ ಲಿಕ್ಕಿಲ್ಲವೇ ಎಂದು ನಾನು ಎಷ್ಟೋ ಸಲ ಯೋಚಿಸುತ್ತಿದ್ದೆ. ಈಗಲಾದರೆ ನೀನೊಬ್ಬ ಮನುಷ್ಯ! ಸ್ವಂತ ದಾರಿಯನ್ನು ಹಿಡಿದೆ. ಮಿತ್ರಾ! ನೀನು ಗುರಿ ಸಾಧಿಸುವಂತಾಗಲಿ! ನಿನಗೆ ಮೋಕ್ಷ ಸಿಗಲಿ!"

ಸಿದ್ಧಾರ್ಥನ ಮಾತಿನ ಪೂರ್ಣ ಅರ್ಥವಾಗಲಿಲ್ಲ ಗೋವಿಂದನಿಗೆ. ಆದುದರಿಂದ ಅವನು ಪುನಃ ಅಸಮಾಧಾನದಿಂದ ಪ್ರಶ್ನಿಸಿದ: "ಸಖನೇ, ಬುದ್ಧನಿಗೆ ಶ್ರದ್ಧಾಂಜಲಿಯನ್ನರ್ಪಿಸುವುದರ ಹೊರತು ಅನ್ಯ ಗತಿಯಿಲ್ಲವೆಂದು ನೀನೂ ಹೇಳು."

ಸಿದ್ಧಾರ್ಥನು ಗೋವಿಂದನ ಭುಜದ ಮೇಲೆ ಕೈಯಿಟ್ಟು ನುಡಿದ- "ಗೋವಿಂದಾ! ನಿನಗೆ ನನ್ನ ಆಶೀರ್ವಾದಗಳು. ಅವನ್ನು ಪುನಃ ಉಚ್ಚರಿ ಸುತ್ತೇನೆ. ನೀನು ಗುರಿ ಸಾಧಿಸುವಂತಾಗಲಿ! ನಿನಗೆ ಮೋಕ್ಷ ಸಿಗಲಿ!"

ಆಗ, ತನ್ನ ಮಿತ್ರನು ತನ್ನಿಂದ ಅಗಲಿಹೋಗುವನೆಂದು ಗೋವಿಂದನಿಗೆ ಹೊಳೆಯಿತು. ಅವನು ಅಳತೊಡಗಿದ.

"ಸಿದ್ಧಾರ್ಥ!"

ಸಿದ್ಧಾರ್ಥನು ಮೃದುವಚನಗಳನ್ನಾಡಿದ: "ಗೋವಿಂದಾ! ನೀನೀಗ ಬುದ್ಧನ ಪವಿತ್ರ ಜನರ ಗುಂಪಿಗೆ ಸೇರಿದವನು. ಅದನ್ನು ಮರೆಯಬೇಡ. ನೀನು ತಾಯಿತಂದೆಗಳನ್ನು ತ್ಯಜಿಸಿರುವೆ. ಹುಟ್ಟು, ಹುಟ್ಟುವಳಿಯನ್ನು ವಿಸರ್ಜಿಸಿರುವೆ ನಿನ್ನ ಸ್ವಬುದ್ಧಿಯನ್ನು ತೊರೆದಿರುವೆ ಸಖ್ಯವನ್ನು ಪರಿತ್ಯಾಗ ಮಾಡಿರುವೆ ಈ ತತ್ತ್ವೋಪದೇಶದ ಅರ್ಥ ಅದು. ಆ ಕೀರ್ತಿವಂತನ ಇಚ್ಛೆ ಅದೇ. ನಿನ್ನ ಹಂಬಲವೂ ಅದೇ ಆಗಿತ್ತು. ಗೋವಿಂದಾ! ನಾಳೆ ನಾನು ನಿನ್ನನ್ನು ಬಿಟ್ಟುಹೋಗುತ್ತೇನೆ".

ಬಹಳ ವೇಳೆಯ ವರೆಗೂ ಆ ಗೆಳೆಯರು ಕಾಡಿನಲ್ಲಿ ಅಲೆದರು ಬಹಳ ಹೊತ್ತಿನ ತನಕ ಮಲಗಿಕೊಂಡರು. ಆದರೆ ನಿದ್ದೆ ಮಾಡಲಾಗಲಿಲ್ಲ ಬುದ್ಧನ ತತ್ತ್ವೋಪದೇಶವನ್ನೇಕೆ ಸ್ವೀಕರಿಸುವದಿಲ್ಲ ಹಾಗೂ ಅವುಗಳಲ್ಲಿ ಯಾವ ದೋಷಗಳಿವೆ ಎಂದು ತಿಳಿಯಲು ಗೋವಿಂದನು ಪದೇ ಪದೇ ಆಗ್ರಹಪಡಿಸಿದ. ಆದರೆ ಪ್ರತಿಸಲವೂ ಸಿದ್ಧಾರ್ಥನು ಅವನ್ನು ಹಾರಿಸಿಕೊಂಡ. "ಗೋವಿಂದಾ ಶಾಂತನಾಗಿರು. ಅವನ ತತ್ತ್ವಬೋಧೆ ಉತ್ತಮವಾಗಿವೆ. ಅವುಗಳಲ್ಲಿ ನಾನು ಯಾವ ಕುಂದುಕೊರತೆಗಳನ್ನು ಹುಡುಕಲಿ?" ಎಂದು ಸಂತೈಸಿದ.

ಬೆಳಗು ಮುಂಜಾನೆ ಬುದ್ಧನ ಶಿಷ್ಯರಲ್ಲೊಬ್ಬನಾದ ಹಿರಿಭಿಕ್ಷು ವನದಲ್ಲಿ ತಿರುಗಾಡುತ್ತಾ ಹೊಸದಾಗಿ ಶಿಷ್ಯರಾಗಲು ಮುಂದೆ ಬಂದವರನ್ನೆಲ್ಲ ಕರೆಯತೊಡಗಿದ. ಅವರಿಗೆ ಕಾವಿಶಾಟಿ ಕೊಟ್ಟು ದೀಕ್ಷಾಬದ್ಧರನ್ನಾಗಿ ಮಾಡುವ ಕೆಲಸವಿತ್ತು. ಅದನ್ನು ಕಂಡ ಗೋವಿಂದನು ತನ್ನ ತರುಣ ಮಿತ್ರನನ್ನು ಆಲಿಂಗಿಸಿ ಹೊರಟುಹೋದ ಮತ್ತು ಒುದ್ಧ ಭಿಕ್ಷುವಿನ ನಿಲುವಂಗಿ ತೊಟ್ಟ.

ಸಿದ್ಧಾರ್ಥ ದೀರ್ಘಾಲೋಚನೆ ಮಾಡುತ್ತ ಆ ತೋಪಿನಲ್ಲಿ ತಿರುಗಿದ.

ಅಲ್ಲಿ ಗೌತಮನನ್ನು ಭೆಟ್ಟಿಯಾದ. ಗೌರವದಿಂದ ಅವನಿಗೆ ನಮಸ್ಕರಿಸಿದ. ಬುದ್ಧನ ಮುಖದಲ್ಲಿ ತುಂಬಿತುಳುಕುತ್ತಿದ್ದ ಶಾಂತಿಸುಖಗಳನ್ನು ಕಂಡು ಸಿದ್ಧಾರ್ಥನಿಗೆ ಧೈರ್ಯಬಂದಿತು. ಮಾತನಾಡಲು ಅನುಮತಿಯನ್ನು ಕೇಳಿದ. ಗೌತಮನು ತಲೆ ಅಲ್ಲಾಡಿಸಿದ.

ಸಿದ್ಧಾರ್ಥ ನುಡಿದ: "ಸತ್ಪುರುಷನೇ! ನಿನ್ನ ಆಶ್ಚರ್ಯಕರವಾದ ತತ್ವೋಪದೇಶವನ್ನು ಕೇಳುವ ಭಾಗ್ಯ ನಿನ್ನೆ ನನಗೆ ಲಭಿಸಿತು. ಅವನ್ನು ಆಲಿಸುವುದಕ್ಕಾಗಿಯೇ ನನ್ನ ಮಿತ್ರನೊಡನೆ ಬಹುದೂರದಿಂದ ಬಂದೆ. ಅವನು ನಿನ್ನ ಶಿಷ್ಯನಾದ. ಆದರೆ ನಾನು ಮಾತ್ರ ಮತ್ತೆ ಹೊಸ ಯಾತ್ರೆಯನ್ನು ಕೈಕೊಳ್ಳುತ್ತಿದ್ದೇನೆ".

'ನಿನ್ನಿಷ್ಟ" ಎಂದ ಗೌತಮ ಬಹಳ ನಯವಿನಯದಿಂದ.

ಸಿದ್ಧಾರ್ಥ ಮಾತು ಮುಂದುವರಿಸಿದ: "ನನ್ನ ಮಾತು ಸ್ವಲ್ಪ ಅಧಿಕ ಪ್ರಸಂಗವಾಗಿರಬಹುದು. ಆದರೆ ಮಹಾಸ್ವಾಮಿಗೆ ನನ್ನ ವಿಚಾರಗಳನ್ನು ತಿಳಿಸಬೇಕೆಂದು ನನ್ನ ಆಶೆ. ಸ್ವಲ್ಪ ಕೇಳುವಿಯಾ?"

ಬುದ್ಧನು ಶಾಂತಚಿತ್ತದಿಂದಲೇ ತಲೆದೂಗಿ ಒಪ್ಪಿದ.

"ಮಹಾಪುರುಷನೇ! ಎಲ್ಲಕ್ಕಿಂತಲೂ ಒಂದು ವಿಷಯದಲ್ಲಿ ನಾನು ನಿನ್ನ ತತ್ವೋಪದೇಶವನ್ನು ಮೆಚ್ಚಿದೆ. ಎಲ್ಲವೂ ಸರಳ. ಸ್ಪಷ್ಟ. ಎಲ್ಲವೂ ಅನುಭವಾಮೃತ. ಈ ಪ್ರಪಂಚವೊಂದು ಪೂರ್ಣ ಮುರಿಯದ ಸಂಕೋಲೆ; ಅನಾದ್ಯನಂತ ಸರಪಣಿ. ಕಾರಣ, ಪರಿಣಾಮಗಳೇ ಅದರ ಗೊಣಸುಗಳು. ಇಷ್ಟರವರೆಗೆ ಈ ರೀತಿ ಯಾರೂ ಸ್ಪಷ್ಟಪಡಿಸಿಲ್ಲ. ಉದಾಹರಿಸಿದವರೂ ಇಲ್ಲ. ನಿನ್ನ ಬೋಧೆಯ ಚಕ್ಷು ಮೂಲಕ ಸಂಯೋಗಶೀಲ, ಅದೃಷ್ಟವನ್ನವಲಂಬಿಸದ, ದೇವತೆಗಳನ್ನು ಹೊಂದಿಕೊಳ್ಳದ ಈ ಜಗತ್ತಿನ ರಹಸ್ಯವನ್ನರಿತು ಬ್ರಾಹ್ಮಣರು ಸಂತೋಷಪಡದೇ ಇರಲಾರರು. ಇದು ಒಳ್ಳೆದೋ ಕೆಟ್ಟದೋ, ಜೀವನವು ಸುಖ ದುಃಖಗಳ ಮಾಲೆಯೋ, ಅದು ಅನಿಶ್ಚಿತವೋ ಇವೆಲ್ಲ ಮಹತ್ವವಾಗಿರಲಿಕ್ಕಿಲ್ಲ. ಆದರೆ ಈ ಪ್ರಪಂಚವೆಲ್ಲ ಒಂದೇ, ಘಟನಾ ಸಂಬಂಧಶೀಲ, ಎಲ್ಲವೂ ಒಂದೇ ಸೆಲೆಯಿಂದ ಹರಿದು ಬಂದುದು, ಕರ್ಮವೇ ಎಲ್ಲದರ ಮೂಲ, ಜನನ ಮರಣಗಳೂ ನಿಜ ಎಂಬುದು ನಿನ್ನ ಬೋಧೆಯಿಂದ ಗೊತ್ತಾಗುತ್ತದೆ. ಆದರೆ ಮಹಾ ಪುರುಷನೇ, ಈ ಜಗತ್ತಿನ ಸರ್ವ ಜೀವಪ್ರಾಣಿಗಳೂ ಒಂದೇ ಹಾಗೂ ಎಲ್ಲಕ್ಕೂ ಕಾರಣ ಪರಿಣಾಮಗಳೇ ಮೂಲವೆಂದೆನ್ನುವ ನಿನ್ನ ಈ ತತ್ವದಲ್ಲಿ ಒಂದೆಡೆ ಮಾತು ಬಿರುಕು ಇದೆ. ಈ ಪ್ರಪಂಚವನ್ನು ತೊರೆದು ಮೋಕ್ಷ ಸಾಧಿಸಬೇಕೆಂದು ಹೇಳುತ್ತೀಯಲ್ಲ! ಪ್ರಪಂಚವೆಲ್ಲ ಒಂದೇ ಮತ್ತು ಇದು ಸತ್ಯನಿತ್ಯವೆನ್ನುವ ನಿನ್ನ ತತ್ವ ಇಲ್ಲಿ

ಬೀಳುತ್ತದೆ. ನಾನು ಆಕ್ಷೇಪಿಸಿದುದಕ್ಕೆ ದಯಮಾಡಿ ಕ್ಷಮಿಸು."

ಗೌತಮ ಅಚಲನಾಗಿ ಶಾಂತ ಮನಸ್ಸಿನಿಂದಲೇ ಆಲಿಸಿದ. ಆ ಮೇಲೆ ಆ ಮನುಜ ಶ್ರೇಷ್ಠನು ನಯವಿನಯದಿಂದಲೂ ತನ್ನ ಸ್ಪಷ್ಟವಾದ ವಾಣಿಯಿಂದಲೂ ಹೇಳಿದ. "ಬ್ರಾಹ್ಮಣಪುತ್ರನೇ! ತತ್ವ ಬೋಧೆಯನ್ನು ನೀನು ಚೆನ್ನಾಗಿ ಗ್ರಹಿಸಿದೆ. ಅವುಗಳಬಗ್ಗೆ ನೀನಿಷ್ಟು ಗಹನ ವಿಚಾರ ಮಾಡಿದುದೂ ನಿನಗೆ ಕೀರ್ತಿಕರ. ನೀನೊಂದು ದೋಷವನ್ನು ಹುಡುಕುತಿದ್ದೀಯಾ! ಪುನಃ ಅದರಬಗ್ಗೆ ವಿಚಾರಿಸು. ಜ್ಞಾನದಾಹವುಳ್ಳ ನೀನು ನಾನಾ ಮತಗಳ ದಟ್ಟಡವಿ ಹಾಗೂ ಶಬ್ದಮೋಹಗಳ ವಿರುದ್ಧ ಎಚ್ಚರದಿಂದಿರು. ಮತಗಳಲ್ಲಿ ಅರ್ಥವಿಲ್ಲ. ಅವು ಸುಂದರ ಅಥವಾ ವಿರೂಪ, ಚೆನ್ನ ಅಥವಾ ಹುಚ್ಚುತನದಿಂದ ಕೂಡಿರಬಹುದು. ಯಾರಾದರೂ ಅವನ್ನು ಅಂಗೀಕರಿಸಲು ಅಥವಾ ತ್ಯಜಿಸಲೂ ಬಹುದು. ನೀನು ಕೇಳಿದ ಬೋಧೆಯೂ ನನ್ನ ಮತವಲ್ಲ. ಜ್ಞಾನದಾಹವುಳ್ಳವರಿಗೆ ಈ ಪ್ರಪಂಚವನ್ನು ವಿವರಿಸುವುದೂ ಅದರ ಗುರಿಯಲ್ಲ, ಅದರ ಗುರಿ ಸಂಪೂರ್ಣ ಭಿನ್ನ. ದುಃಖದಿಂದ ಮುಕ್ತರಾಗುವುದೇ ಅದರ ಗುರಿ. ಗೌತಮನು ಬೋಧಿಸುತ್ತಿರುವುದು ಅದನ್ನೇ. ಮತ್ತೇನನ್ನೂ ಅಲ್ಲ."

ಸಿದ್ಧಾರ್ಥ ಹೇಳಿದ: "ಪುಣ್ಯವಂತನೇ, ನನ್ನ ಮೇಲೆ ಸಿಟ್ಟಾಗಬೇಡ. ಶಬ್ದಮೋಹದಿಂದ ವಾದಿಸಲು ನಾನು ಆ ರೀತಿ ಮಾತನಾಡಲಿಲ್ಲ. ಅಭಿಪ್ರಾಯಗಳಿಗೇನೂ ಅರ್ಥವಿಲ್ಲವೆಂದು ನೀನು ನುಡಿದುದು ಸರಿ. ಆದರೆ ನಾನು ಒಂದು ವಿಷಯ ಹೇಳಲೇ ? ನಿನ್ನ ಮಾತಿನ ಮೇಲೆ ನನಗೆ ಲವಲೇಶವೂ ಸಂಶಯವಿಲ್ಲ. ನೀನು ಬುದ್ಧ, ಸಾವಿರಾರು ಬ್ರಾಹ್ಮಣರೂ ಅವರ ಪುತ್ರರೂ ಸಾಧಿಸಲೆತ್ನಿಸುತ್ತಿರುವ ಉನ್ನತೋನ್ನತ ಗುರಿಯನ್ನು ನೀನು ಮುಟ್ಟಿರುವಿ ಎಂದೂ ನಾನು ಬಲ್ಲೆ. ನೀನೇ, ನಿನ್ನಷ್ಟಕ್ಕೇ, ಆ ಗುರಿಯನ್ನು ಏರಿರುವೆ. ವಿಚಾರ, ಧ್ಯಾನ, ಯೋಗ, ಪಾಂಡಿತ್ಯ ಹಾಗೂ ಜ್ಞಾನಪ್ರಕಾಶದಿಂದ. ಪರಬೋಧೆಯಿಂದ ನೀನು ಏನನ್ನೂ ಕಲಿತಿಲ್ಲ. ಬೋಧೆಯಿಂದ ಯಾರಿಗೂ ಮುಕ್ತಿ ಲಭಿಸದು. ನಿನಗೆ ಜ್ಞಾನೋದಯವಾದ ಗಳಿಗೆಯಲ್ಲಿ ನಿನಗೇನಾಯಿತೆಂಬುದನ್ನು ನೀನು ಮಾತುಗಳಿಂದಾಗಲೀ ಉಪದೇಶಗಳಿಂದಾಗಲೀ ಯಾರಿಗೂ ಹೇಳಲಾರೆ. ಜ್ಞಾನಪ್ರಕಾಶ ಪಡೆದ ಬುದ್ಧನ ತತ್ವಬೋಧೆ ಸರ್ವವ್ಯಾಪಿಯಾಗಿದೆ. ಸದಾಚಾರ ಹಾಗೂ ಕೆಟ್ಟದುದರ ಪರಿಹಾರ

ಜೀವನ ಇತ್ಯಾದಿ ಕಲಿಯುವಂತಹದು ಬಹಳ ಇವೆ ಆದರಿಂದ. ಆದರೆ ಈ ಸ್ಪಷ್ಟ ಮತ್ತು ಅಮೂಲ್ಯ ಬೋಧೆಯಲ್ಲಿ ಇಲ್ಲದುದು ಒಂದು ಇದೆ. ಈ ಪುರುಷೋತ್ತಮನು ಅನುಭವಿಸಿದುವರ ರಹಸ್ಯ ಮಾತ್ರ ಅವರಲ್ಲಿಲ್ಲ. ಲಕ್ಷ ಗಟ್ಟಲೆ ಸಾಧಕರಲ್ಲಿ ಅವನೊಬ್ಬನು ಮಾತ್ರ ಅದನ್ನು ಅನುಭವಿಸಿದ್ದಾನೆ. ನಿನ್ನ ಬೋಧೆಯನ್ನು ಕೇಳಿದಾಗ ನಾನು ಅದನ್ನೇ ಗ್ರಹಿಸಿದೆ ಮತ್ತು ಚಿಂತಿಸಿದೆ. ಆದುದರಿಂದಲೇ ನಾನು ನನ್ನ ದಾರಿ ಹಿಡಿದು ಹೋಗುತ್ತೇನೆ. ಮತ್ತೊಂದು ಅಥವಾ ಇದಕ್ಕಿಂತ ಉತ್ತಮ ಸಿದ್ಧಾಂತವನ್ನು ಹುಡುಕಲು ನಾನು ಹೊರಟಿಲ್ಲ. ಅದು ಇಲ್ಲ ಎಂದು ನನಗೆ ಗೊತ್ತು. ಎಲ್ಲ ಸಿದ್ಧಾಂತ ಗಳನ್ನೂ ಗುರುಗಳನ್ನೂ ಬಿಟ್ಟು ಸ್ವತಃ ಒಬ್ಬನೇ ಆ ಗುರಿ ಸಾಧಿಸಲು ಅಥವಾ ಸಾಯಲು ನಾನು ಹೊರಟಿದ್ದೇನೆ. ಆದರೆ ಪುರುಷಶ್ರೇಷ್ಠನೇ, ನನ್ನ ಕಣ್ಣುಗಳು ಅತ್ಯಂತ ಪವಿತ್ರ ಮನುಷ್ಯನೊಬ್ಬನನ್ನು ಕಂಡ ಈ ದಿನ ಹಾಗೂ ಈ ಗಳಿಗೆಯನ್ನು ನಾನು ಸದಾ ಸ್ಮರಿಸುತ್ತಿರುತ್ತೇನೆ".

ಬುದ್ಧ ಕಣ್ಣುಗಳನ್ನು ಮುಚ್ಚಿಕೊಂಡ. ಅಗಾಧವಾದ ಆ ಮುಖ ಪರಿಪೂರ್ಣ ಶಾಂತಿ ಬೀರಿತು.

ಆ ಮನುಜಶ್ರೇಷ್ಠನು ಹೇಳಿದ: "ನಿನ್ನ ತರ್ಕವು ತಪ್ಪೇನಲ್ಲ. ನೀನು ನಿನ್ನ ಗುರಿ ಮುಟ್ಟುವಂತಾಗಲಿ! ನೀನು ಇಲ್ಲಿ ನೆರೆದ ಪರಿಶುದ್ಧ ಜನರನ್ನೂ ಬೋಧಿಸತ್ವವನ್ನು ಅಂಗೀಕರಿಸಿದ ನನ್ನ ಅಣ್ಣತಮ್ಮಂದಿರನ್ನೂ ಕಂಡೆಯಾ? ದೂರದಿಂದ ಬಂದ ಯತಿಯೇ, ಈ ಎಲ್ಲ ಜನರೂ ಈ ಬೋಧೆಯನ್ನು ಬದಿ ಗೊತ್ತಿ ಇಂದ್ರಿಯ ಸುಖಾಪೇಕ್ಷೆಯಿಂದ ಪ್ರಾಪಂಚಿಕ ಜೀವನಕ್ಕೆ ಮರಳ ಬೇಕೆಂದು ನಿನ್ನ ಯೋಚನೆಯೆ?"

ಸಿದ್ಧಾರ್ಥ ಹೇಳಿದ: "ಅಂತಹ ವಿಚಾರ ಎಂದೂ ಸುಳಿಯಲಿಲ್ಲ. ಅವ ರೆಲ್ಲರೂ ಆ ಬೋಧೆಯನ್ನು ಸ್ವೀಕರಿಸಲಿ! ಅವರು ತಮ್ಮ ಗುರಿ ಮುಟ್ಟುವಂ ತಾಗಲಿ! ಪರಜೀವನವನ್ನು ತೂಗಿ ನಿರ್ಣಯಿಸುವ ಮನುಷ್ಯ ನಾನಲ್ಲ. ನನ್ನದನ್ನೇ ನಿರ್ಧರಿಸಬೇಕಾಗಿದೆ. ನಾನೇ ಆರಿಸಿಕೊಳ್ಳಬೇಕು ಅಥವಾ ನಿರಾಕರಿಸಬೇಕು. ನಾವು ಸನ್ಯಾಸಿಗಳು ಈ ದೇಹದಿಂದ ಮುಕ್ತರಾಗಲು ಬಯಸುತ್ತೇವೆ. ನಾನು ನಿನ್ನ ಅನುಯಾಯಿಯಾದರೆ ಅದು ಕೇವಲ ಹೆಸ ರಿಗೆ ಮಾತ್ರ ಆಗಿ ಉಳಿಯಬಹುದು. ನನಗೆ ಶಾಂತಿ ಲಭಿಸಿತು ಮತ್ತು ನನ್ನ

ಉದ್ಧಾರವಾಯಿತೆಂದು ಆತ್ಮವಂಚನೆಯನ್ನು ಮಾಡಿಕೊಂಡಂತಾಗುವುದು".

ಅರೆಬಿರಿದ ಕಮಲದಂತೆ ಬುದ್ಧನು ನಕ್ಕ. ಅವ್ಯಗ್ರ ಹಾಗೂ ಸ್ನೇಹ ಭಾವದಿಂದಲೇ ಆ ಅಪರಿಚಿತನನ್ನು ದಿಟ್ಟಿಸಿ, "ಯತಿಯೇ! ನೀನು ಬಹಳ ಚತುರ! ಮಿತ್ರಾ! ನೀನು ಜಾಣ್ಮೆಯಿಂದ ಮಾತನಾಡಲು ಬಲ್ಲೆ. ಆದರೆ ಅತಿಚಾತುರ್ಯದಿಂದ ನಿನ್ನನ್ನು ಕಾಪಾಡಿಕೋ" ಎಂದು ನುಡಿದು ಹಾವಭಾವ ದಿಂದಲೇ ಬೀಳ್ಕೊಟ್ಟ.

ಬುದ್ಧ ಅಲ್ಲಿಂದ ಹೊರಟುಹೋದ. ಅವನ ಕೃಪಾಕಟಾಕ್ಷ ಹಾಗೂ ಅರೆಬಿರಿದ ಮುಗುಳು ನಗು ಸಿದ್ಧಾರ್ಥನ ಸ್ಮರಣೆಯಲ್ಲಿ ಅಚ್ಚಳಿಯದೆ ಉಳಿಯಿತು.

ಅವನಂತೆ ನೋಡುವ,ನಗುವ, ನಡೆವ,ನುಡಿವ ಬೇರೆ ಯಾವ ಮನು ಷ್ಯನನ್ನೂ ನಾನು ಇಷ್ಟರವರೆಗೆ ನೋಡಿಲ್ಲವೆಂದು ಸಿದ್ಧಾರ್ಥ ಯೋಚಿಸಿದ. ಹಾಗಾಗಲು ನನ್ನ ಮನೀಷೆ! ಅವನ ನೋಟ,ನಗು,ನಡೆ,ನುಡಿ ಎಷ್ಟು ಸ್ವತಂತ್ರ, ಎಷ್ಟು ಸಂಯಮ, ಎಷ್ಟು ಯೋಗ್ಯ, ಎಷ್ಟು ನಿಷ್ಕಪಟ! ಮಗು ವಿನಂತೆ ಮತ್ತು ಗೂಢವಾಗಿದ್ದಂತೆ ಇದೆ. ತನ್ನನ್ನು ತಾನು ಜಯಿಸಿಕೊಂ ಡಾಗಲೇ ಮನುಷ್ಯ ಆ ರೀತಿ ಕೃಪಾಕಟಾಕ್ಷ ಬೀರಬಲ್ಲ. ಆ ರೀತಿ ನಡೆಯ ಬಲ್ಲ. ನಾನೂ ನನ್ನನ್ನು ಜಯಿಸುತ್ತೇನೆ.

ಬುದ್ಧನು ನನ್ನನ್ನು ಅಪಹರಿಸಿರುವನು. ಆದರೆ ಅದಕ್ಕಿಂತಲೂ ಅಮೂಲ್ಯವಾದುದನ್ನು ದಯಪಾಲಿಸಿದ್ದಾನೆ. ನನ್ನಲ್ಲಿ ನಂಬಿಗೆಯಿದ್ದ ನನ್ನ ಮಿತ್ರನನ್ನು ಅವನು ಅಪಹರಿಸಿದ. ಈಗ ನನ್ನ ಮಿತ್ರನಿಗೆ ಅವನಲ್ಲಿ ನಂಬಿಗೆ· ಅವನು ನನ್ನ ನೆರಳಾಗಿದ್ದ. ಈಗ ಅವನು ಗೌತಮನ ನೆರಳು. ಆದರೆ ಬುದ್ಧ ನನಗೆ ಸಿದ್ಧಾರ್ಥನನ್ನು, ನನ್ನನ್ನು ಬಿಟ್ಟುಕೊಟ್ಟಿದ್ದಾನೆ.

## ೪ನೆಯ ಅಧ್ಯಾಯ

ಪುರುಷೋತ್ತಮನಾದ ಬುದ್ಧನು ಮತ್ತು ಮಿತ್ರನಾಗಿದ್ದ ಗೋವಿಂದ ಉಳಿದ ಆ ವನವನ್ನು ಸಿದ್ಧಾರ್ಥನು ತ್ಯಜಿಸಿ ಹೊರಟನು. ಆ ತೋಪನ್ನು ಬಿಟ್ಟು ಹೋದಾಗ ತನ್ನ ಹಿಂದಿನ ಜೀವನಕ್ರಮವನ್ನೂ ತಾನು ಬಿಟ್ಟು

ಹೋಗುತ್ತಿರುವಂತೆ ಅವನಿಗನ್ನಿಸಿತು ತನ್ನ ದಾರಿ ಹಿಡಿದು ಹೆಜ್ಜೆಹಾಕುತ್ತಾ ನಡೆದಾಗ ಸಿದ್ಧಾರ್ಥನ ತಲೆಯಲ್ಲಿ ಇದೇ ವಿಚಾರ ತುಂಬಿತ್ತು. ಅವನು ಮತ್ತೆ ಮತ್ತೆ ಗಂಭೀರವಾಗಿ ಪರಿಭಾವಿಸಿದ ಅವರಿಂದ ಅವನ ಆ ಭಾವನೆ ಹೆಚ್ಚೇ ಆಯಿತು. ಇದಕ್ಕೇನು "ಕಾರಣ"ವೆಂದೂ ಆಲೋಚಿಸಿದ. ಹೇತು ಮೂಲವನ್ನು ತಿಳಿಯಲೆತ್ನಿಸುವುದೆಂದರೆ ಚಿಂತನೆ. ಚಿಂತನೆಯಿಂದ ಲಭಿಸಿದ ಭಾವನೆಗಳೇ ಜ್ಞಾನ. ಅವು ನಷ್ಟವಾಗುವುದಿಲ್ಲ. ವಾಸ್ತವಿಕ ಸ್ವರೂಪ ಧರಿಸುವವು ಮತ್ತು ಪರಿಪಕ್ವವಾಗುತ್ತ ಹೋಗುತ್ತವೆ.

ಸಿದ್ಧಾರ್ಥ ಇದೇ ರೀತಿ ಪರಾವರ್ತನೆ ನಡೆಸಿದ. ಈಗ ತಾನು ಕುಮಾರನಲ್ಲ, ಪುರುಷನೆಂದು ಕಂಡುಕೊಂಡ. ಹಳೆಯ ಪರೆಯನ್ನು ಕಳಚಿ ಒಗೆವ ಹಾವಿನಂತೆ ತಾನೂ ಏನನ್ನೋ ಕಳೆದುಕೊಂಡಿರುವೆನೆಂದು ತೋಚಿತು. ತನ್ನ ಕೌಮಾರವಸ್ಥೆಯಲ್ಲಿ ತನ್ನೊಂದಿಗಿದ್ದ, ತನ್ನ ಒಂದು ಅಂಶವೇ ಆಗಿದ್ದ ಏನೋ ಒಂದು ಈಗ ಇಲ್ಲ. ಅದು ಗುರುಗಳನ್ನು ಪಡೆಯ ಬೇಕು ಮತ್ತು ಅವರ ತತ್ತ್ವೋಪದೇಶ ಕೇಳಬೇಕೆಂಬ ಹಂಬಲವೇ ಎಂದು ಅವನಿಗೆ ಮನದಟ್ಟಾಯಿತು. ತಾನು ಕೊನೆಯದಾಗಿ ಕಂಡ ಆ ಗುರು ಶ್ರೇಷ್ಠ, ಜ್ಞಾನಶ್ರೇಷ್ಠ, ಅತಿ ಪರಿಶುದ್ಧ, ಬುದ್ಧ ಅವನನ್ನು ಸಿದ್ಧಾರ್ಥ ಬಿಟ್ಟುಬಂದಿದ್ದಾನೆ. ತ್ಯಜಿಸದೆ ಬೇರೆ ಉಪಾಯವೇ ಇಲ್ಲ. ಏಕೆಂದರೆ ಅವನ ಬೋಧೆಯನ್ನು ಸ್ವೀಕರಿಸಲಾಗಲಿಲ್ಲ.

ದಾರಿಯುದ್ದಕ್ಕೂ ಇವರಂತೆ ಚಿಂತಿಸುತ್ತ ಹೋದ. ಒಮ್ಮೆ ತನ್ನೊಳಗೇ ಪ್ರಶ್ನಿಸಿಕೊಂಡ. ಗುರುಗಳಿಂದಲೂ ಬೋಧನೆಯಿಂದಲೂ ಏನನ್ನು ಕಲಿಯಲು ನಿನ್ನ ಆಶೆಯಾಗಿತ್ತು? ಅವರು ಬಹಳ ಕಲಿಸಿದರೂ ಅವರು ಯಾವುದನ್ನು ನಿನಗೆ ಕಲಿಸಲಾಗಲಿಲ್ಲ? ಓಹೋ, ಇದು – ಈ ಅಹಂಭಾವ, ಅದರ ಶೀಲ, ಸ್ವರೂಪ – ಅದು! ಈ ಅಹಂಭಾವವನ್ನು ಜಯಿಸಲು ನನ್ನ ಇಚ್ಛೆಯಾಗಿತ್ತು. ಆದರೆ ಅದು ಶಕ್ಯವಾಗಲಿಲ್ಲ. ಅದನ್ನು ವಂಚಿಸಲು ಮಾತ್ರ ಸಾಧ್ಯವಾಯಿತು. ಅದರಿಂದ ತಪ್ಪಿಸಿಕೊಳ್ಳಲು ಮಾತ್ರ ಆಯಿತು. ಈ ಅಹಂಭಾವ, ಈ ಒಗಟು, ನಾನು ಬದುಕುತ್ತೇನೆ, ನಾನೊಬ್ಬನೇ, ನಾನು ಬೇರೆ, ಇನ್ನಿತರರಿಗಿಂತ ನಾನು ಭಿನ್ನ, ನಾನು ಸಿದ್ಧಾರ್ಥ ಇತ್ಯಾದಿ

ಇವೇ ಈ ಜಗತ್ತಿನಲ್ಲಿ ನನ್ನ ಏಕಮೇವ ಚಿಂತನೆಯಾಗಿದ್ದಿತು. ಆದರೆ ನನ್ನ ಬಗ್ಗೆ, ಸಿದ್ಧಾರ್ಥನ ಬಗ್ಗೆ ನನಗೇ ಎಲ್ಲಕ್ಕಿಂತಲೂ ಅಲ್ಪಜ್ಞಾನವಿದೆಯಲ್ಲ!

ನಡೆಯುತ್ತಿದ್ದ ಈ ಚಿಂತಕನು ಥಕ್ಕನೇ ಒಂದೆಡೆ ನಿಂತುಬಿಟ್ಟ. ಮತ್ತೊಂದು ವಿಚಾರವೂ ಹೊಳೆಯಿತು : ನನ್ನ ಬಗ್ಗೆ ನನಗೆ ಏನೂ ಗೊತ್ತಿಲ್ಲ ವೇಕೆ? ಸಿದ್ಧಾರ್ಥನು ನನಗೇ ಪರಕೀಯನಾಗಿರುವುದರ ಕಾರಣವೇನು? ಓಹೋ, ನನ್ನ ಬಗ್ಗೆ ನನಗೆ ಭಯ. ನನ್ನಿಂದ ನಾನು ಓಡಿಹೋಗುತ್ತಿದ್ದೆ. ನಾನು ಬ್ರಹ್ಮ, ಆತ್ಮಗಳನ್ನು ಶೋಧಿಸುತ್ತಿದ್ದೆ. ನನ್ನೊಳಗಿರುವ ಆತ್ಮ, ಚೈತನ್ಯ, ದೈವತ್ವ, ಸಂಪೂರ್ಣತ್ವಗಳನ್ನು ಅರಸುವುದಕ್ಕಾಗಿ ನನ್ನನ್ನು ನಾಶ ಗೊಳಿಸಲು ಬಯಸಿದೆ. ಆ ರೀತಿ ಮಾಡುವ ಯತ್ನದಲ್ಲಿ ನನ್ನನ್ನು ಕಳೆದು ಕೊಂಡೆ!

ಸಿದ್ಧಾರ್ಥ ಆಕಾಶವನ್ನು ದಿಟ್ಟಿಸಿದ. ತನ್ನ ಸುತ್ತುಮುತ್ತಲಿನ ನಿಸರ್ಗವನ್ನು ನೋಡಿದ. ಅವನ ಮೊಗದಲ್ಲಿ ಮುಗುಳು ನಗು ಮಿಂಚಿತು. ದೀರ್ಘಕಾಲದ ನಿದ್ದೆಯಿಂದ ತಾನು ಎದ್ದ ಬಲವಾದ ಭಾವನೆ ಹುಟ್ಟಿತು. ತಕ್ಷಣ ಕಾರ್ಯೋನ್ಮುಖನಾದ ಮನುಷ್ಯನಂತೆ ವೇಗದಿಂದ ನಡೆಯಲಾರಂಭಿಸಿದ.

ಹೌದು. ಸಿದ್ಧಾರ್ಥನಿಂದ ತಪ್ಪಿಸಿಕೊಳ್ಳಲು ನಾನಿನ್ನು ಯತ್ನಿಸುವುದಿಲ್ಲ. ಆತ್ಮ ಮತ್ತು ಪ್ರಪಂಚದ ದುಃಖ ದುಮ್ಮಾನಗಳನ್ನು ನಾನು ಇನ್ನು ಚಿಂತಿಸುವುದಿಲ್ಲ. ಭಗ್ನಾವಶೇಷಗಳಲ್ಲಿ ಒಂದು ರಹಸ್ಯವನ್ನು ಹುಡುಕುವದಕ್ಕಾಗಿ ನಾನು ನನ್ನ ದೇಹವನ್ನು ಚಿತ್ರಹಿಂಸೆಗೆ ಗುರಿಪಡಿಸುವುದಿಲ್ಲ. ನಾಶಗೊಳಿಸುವುದೂ ಇಲ್ಲ. ನಾನು ಯೋಗ, ಅಥರ್ವವೇದ, ಸನ್ಯಾಸ ಅಥವಾ ಇನ್ನಿತರ ಯಾವುದೇ ಬೋಧನೆಯನ್ನು ಅಭ್ಯಾಸ ಮಾಡಲಾರೆ, ನನ್ನಿಂದಲೇ ನಾನು ಕಲಿತುಕೊಳ್ಳುವೆ. ನಾನು ನನ್ನ ಶಿಷ್ಯನಾಗುವೆ. ಸಿದ್ಧಾರ್ಥನ ರಹಸ್ಯವನ್ನು ನನ್ನಿಂದಲೇ ತಿಳಿಯುವೆ!

ಈ ಪ್ರಪಂಚವನ್ನು ಪ್ರಥಮ ಸಲ ಕಾಣುವವರಂತೆ ಅವನು ಸುತ್ತಲೂ ನೋಡಿದ. ಪ್ರಕೃತಿಯು ಸುಂದರವೂ, ವಿಚಿತ್ರವೂ, ಅತ್ಯದ್ಭುತವೂ ಆಗಿ ತೋರಿತು. ಒಂದೆಡೆ ನೀಲ, ಇನ್ನೊಂದೆಡೆ ಹಳದಿ, ಮತ್ತೊಂದೆಡೆ ಹಸುರು; ಆಕಾಶ, ನದಿ, ಗುಡ್ಡ, ಕಾಡು ಎಲ್ಲವೂ ಸುಂದರ; ಆಶ್ಚರ್ಯಕರ; ಮನ

ಮೋಹಕ. ಅವುಗಳ ಮಧ್ಯೆ ಆತ್ಮಜ್ಞಾನಾಪೇಕ್ಷಿಯಾದ ಮತ್ತು ಜಾಗೃತನಾದ ಸಿದ್ಧಾರ್ಥ!

ಈ ಹಳದಿ ನೀಲ, ನದಿಉಪವನಗಳೆಲ್ಲ ಮೊದಲನೇ ಸಲ ಸಿದ್ಧಾರ್ಥನ ಕಣ್ಣಮುಂದೆ ಕಟ್ಟಿದುವು. ಗಹನವಾಗಿ ವಿಚಾರಮಾಡುವ ಬ್ರಾಹ್ಮಣರು ತಾತ್ಸಾರಿಪ ಮನ್ಮಥನ ಇಂದ್ರಜಾಲ ಇವಲ್ಲ; ಮಾಯೆಯ ಮುಸುಕೂ ಆಗಿರಲಿಲ್ಲ. ದೈವಯೋಗದಿಂದ ಸ್ವರೂಪ ತಾಳಿದ ಪ್ರಾಕೃತಿಕ ವೈವಿಧ್ಯವೂ ಅಲ್ಲ. ಅವರು ಭೇದವನ್ನು ತುಚ್ಛೀಕರಿಸಿ ಐಕ್ಯಸಾಧನೆಗಾಗಿ ಹೆಣಗುವರು. ನದಿಯು ನದಿಯೇ. ಸಿದ್ಧಾರ್ಥನಲ್ಲಿರುವ ದೈವತ್ವವು ನದಿಯಲ್ಲೂ ಆಕಾಶದಲ್ಲೂ ರಹಸ್ಯವಾಗಿದ್ದರೆ ಅದು ದೈವೇಚ್ಛೆ. ಅದು ಅಲ್ಲಿದೆ. ಇಲ್ಲಿ ಸಿದ್ಧಾರ್ಥನಿದ್ದಾನೆ. ಸಾಕ್ಷಾತ್ಕಾರವು ವಸ್ತುಗಳಾಚೆ ಇಲ್ಲ. ಅವುಗಳೊಳಗೇ ಅಡಕವಾಗಿದೆ. ಎಲ್ಲವುಗಳಲ್ಲೂ ಇದೆ.

ನಾನೆಂತಹ ಕುರುಡ; ಎಷ್ಟು ಕಿವುಡ; ಮೂರ್ಖನಾಗಿದ್ದೆ. ಯಾವುದನ್ನಾದರೂ ಅಭ್ಯಾಸ ಮಾಡಲೆಳಸಿ ಓದುವವನು ಲಿಪಿ, ಅರ್ಧವಿರಾಮ ಮೊದಲಾದ ಚಿಹ್ನೆಗಳನ್ನು ತಿರಸ್ಕರಿಸುವುದಿಲ್ಲ. ಅದು ಭ್ರಮೆ, ನಿರುಪಯೋಗಿ ಎಂದು ಹೆಸರಿಡದೆ ಅವುಗಳನ್ನು ಓದಿ, ಅಭ್ಯಸಿಸಿ ಪ್ರೀತಿಸುತ್ತಾನೆ. ಆದರೆ ಪ್ರಪಂಚದ ಮತ್ತು ನನ್ನ ಸ್ವರೂಪ ಗ್ರಂಥಗಳನ್ನು ಓದಬಯಸಿದ ನಾನು ಲಿಪಿ ಚಿಹ್ನೆಗಳನ್ನು ಉಪೇಕ್ಷಿಸಿದ್ದೆ. ನಾನು ಈ ದೃಶ್ಯಪ್ರಪಂಚವನ್ನು ಮಾಯೆ ಎಂದೆ. ನನ್ನ ಕಣ್ಣು-ನಾಲಿಗೆಗಳನ್ನು ದೈವಯೋಗ ಎಂದೆ. ಅದು ಇಲ್ಲಿಗೆ ಮುಗಿಯಿತು. ನಾನು ಎಚ್ಚರಗೊಂಡಿದ್ದೇನೆ. ಈಗ ನಾನು ಜಾಗೃತನಾಗಿದ್ದೇನೆ. ಅಲ್ಲಲ್ಲ, ಇಂದೇ ಜನಿಸಿದಂತಾಗಿದೆ!

ಈ ವಿಚಾರಗಳು ಹಾದುಹೋದಾಗ ಒಂದೆಡೆ ಹಾದಿಯಲ್ಲಿ ಸಿದ್ಧಾರ್ಥ ಹಾವು ಕಂಡವರಂತೆ ತಟ್ಟನೇ ನಿಂತ.

ಆಗ ಇದು ಕೂಡಾ ಅವನಿಗೆ ಸ್ಪಷ್ಟವೆನಿಸಿತು : ಎಚ್ಚರಗೊಂಡವನು ಅಥವಾ ಹೊಸ ಹುಟ್ಟುಪಡೆದವನು ಪುನಃ ತನ್ನ ಜೀವನವನ್ನು ಸಂಪೂರ್ಣ ಪುನರಾರಂಭಿಸಬೇಕು. ಅದೇ ದಿನ ಮುಂಜಾನೆ, ಅವನು ಜೇತವನವನ್ನು, ಬುದ್ಧನಿರುವ ತೋಪನ್ನು ತ್ಯಜಿಸಿದಾಗ ಅದೇ ಅವನ ಇಚ್ಛೆಯಾಗಿತ್ತು. ಸನ್ಯಾಸಿಯಾಗಿ ಅಷ್ಟು ವರುಷಗಳನ್ನು ಕಳೆದ ತರುವಾಯ ಮತ್ತೆ ತನ್ನ

ಮನೆ, ತಾಯಿತಂದೆಗಳ ಬಳಿ ಮರಳಲು ಬಯಸಿದ್ದ. ಆದರೆ ಈಗ ದಾರಿ ಮಧ್ಯೆ ಕಂಬದಂತೆ ನಿಂತ ಸಿದ್ಧಾರ್ಥನು ಪುನಃ ಈರೀತಿ ಆಲೋಚಿಸಿದ : ನಾನು ಮೊದಲಿನಂತಿಲ್ಲ; ನಾನು ಈಗ ಯತಿಯಲ್ಲ; ಪುರೋಹಿತನಲ್ಲ; ಬ್ರಾಹ್ಮಣನೂ ಅಲ್ಲ. ಆದುದರಿಂದ ಮನೆಗೆ ಮರಳಿ ತಂದೆಯೊಂದಿಗೆ ಮಾಡುವ ಕಾರ್ಯವಾದರೂ ಯಾವುದು? ಅಭ್ಯಾಸವೇ? ಯಾಗಯಜ್ಞಗಳೇ? ಧ್ಯಾನಯೋಗಗಳೇ? ಹ, ಇವೆಲ್ಲ ಇಲ್ಲಿಗೆ ಕೊನೆಗಂಡಿತು.

ಸಿದ್ಧಾರ್ಥ ಕಲ್ಗಂಬದಂತೆಯೇ ನಿಂತಿದ್ದ. ಹಿಮಗಾಳಿ ಬೀಸಿತು. ತಾನು ಏಕಾಂಗಿಯಾಗಿ ಇರುವೆನೆಂದು ಕಂಡುಕೊಂಡ ಸಣ್ಣ ಪ್ರಾಣಿಯಂತೆ ಹಕ್ಕಿ ಅಥವಾ ಮೊಲದಂತೆ ಒಳಗೊಳಗೇ ನಡುಗಿದ. ಅವನು ಮನೆಯನ್ನು ತೊರೆದು ಅನೇಕ ವರುಷಗಳಾಗಿವೆ. ಇಷ್ಟರ ವರೆಗೆ ಅವನು ಹೀಗೆಂದೂ ಅನುಭವಿಸಿರಲಿಲ್ಲ. ಈಗ ಅದರ ಅನುಭವವಾಗಿದೆ. ಮೊದಲು ಧ್ಯಾನಮಗ್ನ ನಾಗಿದ್ದ ಕಾಲದಲ್ಲಿ ಅವನು ಅವನ ತಂದೆಯ ಸುಪುತ್ರನಾಗಿದ್ದ. ಮಾನ ಮರ್ಯಾದೆಯುಳ್ಳ ಬ್ರಾಹ್ಮಣನಾಗಿದ್ದ. ಧಾರ್ಮಿಕ ಪುರುಷನಾಗಿದ್ದ. ಈಗ ಅವನು ಕೇವಲ ಸಿದ್ಧಾರ್ಥ.

ಸಿದ್ಧಾರ್ಥ ಬಲವಾಗಿ ಉಸಿರನ್ನು ಒಳಗೆ ಎಳೆದುಕೊಂಡ. ಒಂದು ಕ್ಷಣ ನಡುಗಿದ. ಅವನಷ್ಟು ಯಾರೂ ಏಕಾಂಗಿಯಾಗಿಲ್ಲ. ಅವನು ಯಾವುದೇ ಶ್ರೀಮಂತ ಕುಲದವನಲ್ಲ. ಯಾವುದೇ ಗುಂಪಿಗೆ ಸೇರಿದ ಕಲಾ ಕಾರನಲ್ಲ. ಹಾಗಿರುತಿದ್ದರೆ ಅಲ್ಲಿ ಆಶ್ರಯ ಪಡೆಯಬಹುದಾಗಿತ್ತು. ಬ್ರಾಹ್ಮ ಣರ ಜೀವನ ನಡೆಸೋಣವೆಂದರೆ ಅವನೀಗ ಬ್ರಾಹ್ಮಣನಲ್ಲ. ಕಾಡಿನಲ್ಲಿರುವ ಯತಿಗಳ ಮಾರ್ಗ ಹಿಡಿದ ಸನ್ಯಾಸಿಯೂ ಅಲ್ಲ. ಅರಣ್ಯದ ಮೂಲೆಯಲ್ಲಿರುವ ಯತಿ ಕೂಡಾ ಒಬ್ಬಂಟಿಗನಲ್ಲ. ಅವನು ಕೂಡಾ ಒಂದು ಜನವರ್ಗಕ್ಕೆ ಸೇರಿದವನು. ಗೋವಿಂದ ಬುದ್ಧ ಭಿಕ್ಷುವಾದ. ಸಾವಿರಾರು ಭಿಕ್ಷುಗಳು ಈಗ ಅವನ ಸಹೋದರರು. ಬುದ್ಧನಂತೆ ನಿಲುವಂಗಿ ತೊಟ್ಟು ಅವನ ನಂಬಿ ಗೆಗಳಲ್ಲಿ ಭಕ್ತಿ ಇಟ್ಟು, ಅವನ ಭಾಷೆಯನ್ನು ಆಡುತ್ತಾನೆ. ಆದರೆ ಅವನು ಸಿದ್ಧಾರ್ಥ, ಎಲ್ಲಿಗೆ ಹೋಗಲಿ? ಯಾರ ಜೀವನದೊಡನೆ ಸಮರಸವಾಗಲಿ? ಯಾರ ಭಾಷೆಯನ್ನಾಡಲಿ?

ಆ ಕ್ಷಣ, ಅವನ ಕಣ್ಮುಂದಿನ ಪ್ರಪಂಚವೆಲ್ಲ ಕರಗಿದಂತಾಯಿತು.

ಆಕಾಶದಲ್ಲಿರುವ ನಕ್ಷತ್ರದಂತೆ ಅವನಲ್ಲಿ ನಿಂತಿದ್ದ. ಹತಾಶೆ ಅವನನ್ನು ಮುತ್ತಿತು. ಆದರೆ ಮೊದಲಿಗಿಂತಲೂ ತಾನು ಸ್ವತಂತ್ರನೆಂದು ಮತ್ತೆ ಮನಸ್ಸನ್ನು ಭದ್ರಪಡಿಸಿಕೊಂಡ. ಅದು ಅವನ ಹೊಸ ಹುಟ್ಟಿನ ಕೊನೆಯ ವೇದನೆಗಳು. ಆ ಮೇಲೆ ಅವನು ವೇಗದಿಂದ ಮುಂದೆ ಮುಂದೆ ನಡೆದ. ಮನೆಯ ಕಡೆಗಲ್ಲ. ತಾಯಿ ತಂದೆ ಇದ್ದಲ್ಲಿಗಲ್ಲ. ಅವನು ಒಮ್ಮೆಯೂ ಹಿಂದೆ ನೋಡಲಿಲ್ಲ.

## ೫ ನೆಯ ಅಧ್ಯಾಯ

ಸಿದ್ಧಾರ್ಥ ಪ್ರಯಾಣ ಬೆಳೆಸಿದಾಗ ಹೆಜ್ಜೆಹೆಜ್ಜೆಗೆ ಹೊಸಹೊಸ ಸಂಗತಿಗಳನ್ನು ತಿಳಿದುಕೊಂಡ. ಜಗತ್ತೆಲ್ಲ ರೂಪಾಂತರ ಹೊಂದಿತ್ತು. ಅವನು ತುಂಬಾ ಮೋಹಿತನಾದ. ಪರ್ವತ ಅರಣ್ಯಗಳ ಹಿಂದಿನಿಂದ ಸೂರ್ಯನು ಉದಯಿಸಿ ಬಹುದೂರದಲ್ಲಿರುವ ತಾಳಮರಗಳ ಮರೆಯಲ್ಲಿ ಮುಳುಗುವುದನ್ನೂ ನೋಡಿದ. ರಾತ್ರಿ ಆಕಾಶದಲ್ಲಿ ಮಿನುಗುವ ತಾರೆಗಳನ್ನೂ ನೀಲ ಸಾಗರದಲ್ಲಿ ದೋಣಿಯಂತೆ ಚಲಿಸುವ ಕೋರೆ ಚಂದ್ರನನ್ನೂ ದಿಟ್ಟಿಸಿದ. ನಾನಾ ಮರಗಳು, ನಕ್ಷತ್ರಗಳು, ಪ್ರಾಣಿಗಳು, ಮೋಡಗಳು, ಕಾಮನಬಿಲ್ಲು, ಹೂ, ಹಣ್ಣು ಕಲ್ಲುಗಳು, ತೊರೆ ಕೆರೆ ನದಿ ನದಗಳನ್ನು ಕಂಡ. ಮುಂಜಾನೆ ಹುಲ್ಲಿನ ಮೇಲೆ ಮುತ್ತಿನಂತೆ ನಿಂತ ಹಿಮಹನಿಗಳನ್ನೂ ಪರಿಶೀಲಿಸಿದ. ಹಕ್ಕಿಗಳು ಗಾನಗೈದುವು. ತುಂಬಿಗಳು ಝೇಂಕರಿಸಿದುವು. ಭತ್ತದ ಗದ್ದೆಗಳ ಮೇಲೆ ಮರ್ಮರ ಮೃದು ಗಾಳಿ ಬೀಸಿತು.

ಈ ಎಲ್ಲ, ನಾನಾ ಬಣ್ಣದ ಸಾವಿರಾರು ಸ್ವರೂಪಗಳು ಯಾವಾಗಲೂ ಇದ್ದುವು. ಸೂರ್ಯ ಚಂದ್ರರು ಯಾವಾಗಲೂ ಬೆಳಗುತಿದ್ದರು. ನದಿ ಯಾವಾಗಲೂ ಹರಿಯುತಿತ್ತು. ತುಂಬಿಗಳು ಯಾವಾಗಲೂ ಝೇಂಕರಿಸುತಿದ್ದುವು. ಆದರೆ ಈ ಹಿಂದೆ ಸಿದ್ಧಾರ್ಥನಿಗೆ ಅವು ಶೂನ್ಯವಾಗಿದ್ದುವು. ಅವೆಲ್ಲ ಕ್ಷಣಿಕ ಮೋಹದ ಮುಸುಕುಗಳಾಗಿದ್ದುವು. ಅವುಗಳ ಮೇಲೆ ಅಪನಂಬಿಕೆ. ಅನಾಧಾರ ವಸ್ತುಗಳು. ವಿಚಾರ ಬಾಹಿರವಾದವುಗಳು. ಏಕೆಂದರೆ ಅವೆಲ್ಲ ವಾಸ್ತ

ವಿಕವಲ್ಲ. ವಾಸ್ತವಿಕತೆಯು ಅನ್ವಶ್ಯವಾಗಿ ತೋರಿತ್ತು.

ಆದರೆ ಈಗ ಅವನ ಕಣ್ಣುಗಳು ದೃಶ್ಯ ಪ್ರಪಂಚವನ್ನು ನೋಡ ತೊಡಗಿವೆ. ಪ್ರಪಂಚದಲ್ಲಿ ತನಗೊಂದು ಸ್ಥಾನವನ್ನು ಅವನು ಹುಡುಕತೊಡಗಿದ. ಅವನು ವಾಸ್ತವಿಕತೆಯನ್ನು ಹುಡುಕ ಬಯಸಿಲ್ಲ. ಈ ರೀತಿ ಹುಡುಕದೆ, ಮಗುವಿನಂತೆ ಈ ಸುಂದರ ಲೋಕವನ್ನು ಅವನು ನೋಡುತಿದ್ದಾನೆ. ಚಂದ್ರ ತಾರಾಗಣ ಇವೆಲ್ಲ ಅನುಪಮ ಸೌಂದರ್ಯದಿಂದ ಕಂಗೊಳಿಸುತ್ತಿವೆ. ತೊರೆ, ಪರ್ವತ, ಅರಣ್ಯ, ಸಮುದ್ರ ತೀರ, ಆಡು, ಕುರುವಾಯು, ಹೂ, ಪಾತರಗಿತ್ತಿ, ಎಲ್ಲವೂ ಸುಂದರ. ಮಗುವಿನಂತೆ, ಯಾವ ಅಪನಂಬಿಕೆ ಇಲ್ಲದೆ, ಸುತ್ತುಮುತ್ತಲಿನ ಈ ಸೌಂದರ್ಯವನ್ನು ಕಾಣುವುದೂ ಒಂದು ರೀತಿ ಚಂದವೇ.

ಒಂದೆಡೆ ಸೂರ್ಯನ ಪ್ರಚಂಡ ಉರಿ. ಇನ್ನೊಂದೆಡೆ ಅರಣ್ಯದ ನೆರಳಲ್ಲಿ ತಂಪು. ಮತ್ತೊಂದೆಡೆ ಬೂದಿಗುಂಬಳಕಾಯಿಗಳೂ ಬಾಳೆಹಣ್ಣುಗಳೂ ಬೆಳೆದಿವೆ. ಹಗಲೂ ಇರುಳೂ ಬೇಗ ಬೇಗನೇ ಉರುಳುತ್ತಿವೆ. ಅರಣ್ಯದ ಮಧ್ಯದಲ್ಲಿ ಉನ್ನತ ಮರಗಳ ರೆಂಬೆಗಳಲ್ಲಿ ಹಾರಾಡುತ್ತ ಚೀರಾಡುತ್ತ ಅಲೆವ ಮಂಗಗಳ ಗುಂಪೊಂದನ್ನೂ ಸಿದ್ಧಾರ್ಥ ನೋಡಿದ. ಕುರಿಯ ಬೆಂಬತ್ತಿ ಕಲೆತ ಒಂದು ಟಗರನ್ನು ಕಂಡ. ಒಂದು ಕೊಳದಲ್ಲಿ ಹಸಿವೆಯಿಂದ ಕಂಗೆಟ್ಟ ಬಾತುಕೋಳಿ ಮೀನುಗಳನ್ನು ಬೆನ್ನಟ್ಟುತಿತ್ತು. ತಳತಳಿಸುವ ಸಣ್ಣ ಸಣ್ಣ ಮೀನುಗಳು ಗಾಬರಿಯಿಂದಲೂ ಚಿಂತೆಯಿಂದಲೂ ದೂರ ದೂರ ನುಗ್ಗುತ್ತಿದ್ದುವು. ಉಕ್ಕಿದ ಕೋಪದಿಂದ ಆ ಬಾತು ಬೆನ್ನಟ್ಟಿದೆ. ಆಗ ಕೊಳದ ನೀರು ಸುಳಿಸುಳಿಯಾಗಿ ಸುಳಿಯುತ್ತಿದೆ.

ಇದೆಲ್ಲವೂ ಹಿಂದೆ ಇತ್ತು. ಸಿದ್ಧಾರ್ಥನ ದೃಷ್ಟಿಗೆ ಬಿದ್ದಿರಲಿಲ್ಲ. ಅವನೇ ಈ ಪ್ರಪಂಚದಲ್ಲಿ ಇರಲಿಲ್ಲ. ಈಗ ಅವನಿದ್ದಾನೆ. ಅಷ್ಟೇ ಅಲ್ಲ, ಅವನೂ ಅದರ ಒಂದಂಶವಾಗಿದ್ದಾನೆ. ತನ್ನ ಕಣ್ಣುಗಳಿಂದಲೇ ಕತ್ತಲೆ ಬೆಳಕುಗಳನ್ನು ಕಂಡ. ಮನಸ್ಸಿನಿಂದ ಚಂದ್ರ, ತಾರಾಗಣವನ್ನು ಈಕ್ಷಿಸಿದ.

ಜೇತವನದಲ್ಲಿ ತಾನು ಅನುಭವಿಸಿದುದನ್ನೆಲ್ಲ ಸಿದ್ಧಾರ್ಥ ಮತ್ತೆ ಸ್ಮರಿಸಿಕೊಂಡ. ಮಹಾತ್ಮನಾದ ಬುದ್ಧನ ಉಪದೇಶ, ಗೋವಿಂದನಿಂದ ಅಗಲಿಕೆ, ಆ ಗುಣನಿಧಿಯಾದ ಗೌತಮನೊಡನೆ ನಡೆಸಿದ ಸಂಭಾಷಣೆ ಎಲ್ಲ ನೆನಪಿಗೆ

ಬಂದಿತು. ಆ ಮನುಜಶ್ರೇಷ್ಠನೊಡನೆ ತಾನು ಆಡಿದ ಪ್ರತಿಯೊಂದು ಮಾತನ್ನು ನೆನಸಿಕೊಂಡ. ಆಗ ತನ್ನ ಬಾಯಿಂದ ಬಂದ ಮಾತುಗಳು ಆಶ್ಚರ್ಯಕರ. ಏಕೆಂದರೆ ಅವನಿಗೆ ಅದು ಗೊತ್ತೇ ಇರಲಿಲ್ಲ. ಬುದ್ಧನ ಜ್ಞಾನ ಮತ್ತು ರಹಸ್ಯವನ್ನು ಪರರಿಗೆ ಉಪದೇಶಿಸಲಾಗದು, ಅದನ್ನು ಶಬ್ದಗಳಿಂದ ವರ್ಣಿಸಲಾಗದು, ಮತ್ತೊಬ್ಬರಿಗೆ ತಿಳಿಸಲೂ ಬರುವಂತಿಲ್ಲ ಎಂದು ಅವನು ಬುದ್ಧನೊಡನೆ ನುಡಿದಿದ್ದ. ಆ ಜ್ಞಾನೋದಯದ ರಸನಿಮಿಷದಲ್ಲಿ ಬುದ್ಧನು ಒಮ್ಮೆ ಅನುಭವಿಸಿದುದನ್ನೇ ಈಗ ತಾನು ಅನುಭವಿಸಬೇಕೆಂದು ಹೊರಟದ್ದಾಗಿದೆ. ಅದರ ಅನುಭವ ಈಗ ಆರಂಭವಾದಂತಾಗಿದೆ.

ತಾನೇ ಆ ಅನುಭವವನ್ನು ಹೊಂದತಕ್ಕುದು. "ನಾನು" ಎಂಬನ್ನುವುದು ಆತ್ಮ, ಬ್ರಹ್ಮದಂತೆ ಅದೂ ಅಮರ ಸ್ವಭಾವವುಳ್ಳದ್ದು ಎಂದು ಅವನರಿತು ಎಷ್ಟೋ ಕಾಲವಾಗಿದೆ. ಆದರೆ ಆ ಅಹಂಜ್ಞಾನ ಅಥವಾ "ನಾನು" ಎಂದು ಕರೆಯಲ್ಪಡುತ್ತಿರುವುದನ್ನು ಅವನು ಇಷ್ಟರವರೆಗೂ ಕಂಡಿಲ್ಲ. ಅವನು ನಾನಾ ವಿಚಾರಗಳ ಬಲೆಯಲ್ಲಿ ಅವನ್ನು ಹಿಡಿಯಲು ಯತ್ನಿಸಿದ್ದ. ಈ ದೇಹವು "ಅಹಂ" ಅಲ್ಲ. ಪಂಚೇಂದ್ರಿಯಗಳ ಚಿನ್ನಾಟವಲ್ಲ. ಬುದ್ಧಿಯಲ್ಲ.. ಇವೆಲ್ಲವುಗಳಿಂದ ದೊರೆತ ಸಮಾಧಾನವೂ ಅಲ್ಲ. ಇವೆಲ್ಲವುಗಳಿಂದ ಪ್ರೇರಣೆ ಹೊಂದುವ ಹೊಸ ಹೊಸ ವಿಚಾರಗಳೂ ಅಲ್ಲ.

ಬುದ್ಧಿ ಮತ್ತು ಪಂಚೇಂದ್ರಿಯಗಳು ಒಳ್ಳೆಯ ಸೊಗಸಿನ ವಸ್ತುಗಳು. ಅವುಗಳ ಹಿನ್ನೆಲೆಯಲ್ಲೇ ಕೊನೆಯ ರಹಸ್ಯ ಅಡಗಿದೆ. ಇವುಗಳ ಮಾತನ್ನು ಆಲಿಸುವದೂ ಇವೆರಡರೊಡನೆ ಚಿನ್ನಾಟವಾಡುವುದೂ ಯೋಗ್ಯ. ಅವನ್ನು ತಾತ್ಸಾರ ಮಾಡುವುದರಲ್ಲಾಗಲೀ ಅತಿಯಾಗಿ ಮಹತ್ವ ಕೊಡುವುದರಲ್ಲಾಗಲೀ ಅರ್ಥವಿಲ್ಲ. ಆದರೆ ಈ ಎರಡರ ವಾಣಿಗೆ ಕಿವಿಗೊಡಬೇಕು. ಅಂತರ್ವಾಣಿ ಹೇಳಿದಂತೆ ಮಾಡುವೆ. ಎಲ್ಲಿಯೂ ತಡವರಿಸಲಾರೆ. ಆ ವಾಣಿ ತೋರಿದ ದಾರಿ ಹಿಡಿವೆ. ಕರೆದಲ್ಲಿ ತೆರಳುವೆ. ಗೌತಮುನಿಗೆ ಜ್ಞಾನೋದಯವಾದ ಆ ಅಮೃತ ಗಳಿಗೆಯಲ್ಲಿ ಅವನು ಆ ಬೋಧಿ ಮಹಾವೃಕ್ಷದ ಕೆಳಗೇಕೆ ಕುಳಿತ? ಅವನೊಂದು ವಾಣಿ ಕೇಳಿದ. ಅದು ಅವನ ಅಂತರ್ವಾಣಿಯೇ. ಆ ಮರದಡಿ ವಿಶ್ರಾಂತಿ ತೆಗೆದುಕೊಳ್ಳಲು ಅದು ಆಜ್ಞಾಪಿಸಿತು. ಅವನು ದೇಹದಂಡನೆಯಿಂದ ಅದನ್ನು ಚಿತ್ರಹಿಂಸೆಗೆ ಗುರಿಪಡಿಸಿರಲಿಲ್ಲ. ಯಾಗ

ಯಜ್ಞಗಳಲ್ಲಿ ನಿರತನಾಗಿರಲಿಲ್ಲ ತೀರ್ಥಸ್ನಾನ ಜಪಗಳನ್ನೂ ಮಾಡಿರಲಿಲ್ಲ. ಅವನು ಆ ದಿವ್ಯವಾಣಿಯನ್ನು ಆಲಿಸಿದ. ಅದನ್ನಲ್ಲದೆ ಅನ್ಯ ಬಾಹ್ಯ ಸಂಗತಿಗಳಿಗೆ ವಿಧೇಯನಾಗಲಾರೆ. ಆ ವಾಣಿ ಕೇಳಲು ಸಿದ್ಧನಾಗಬೇಕು. ಅದೇ ಉತ್ತಮ. ಅದೇ ಅತ್ಯಾವಶ್ಯಕ. ಉಳಿದದ್ದೆಲ್ಲ ಅನಗತ್ಯ.

ರಾತ್ರಿ ಸಿದ್ಧಾರ್ಥ ದೋಣಿಗನ ಛತ್ತದ ಹುಲ್ಲಿನ ಗುಡಿಸಲಿನಲ್ಲಿ ಮಲಗಿದ್ದಾಗ ಒಂದು ಕನಸು ಬಿತ್ತು ಬುದ್ಧ ಭಿಕ್ಷುವಿನ ಕಾವಿ ನಿಲುವಂಗಿ ಧರಿಸಿದ ಗೋವಿಂದ ಅವನ ಮುಂದೆ ನಿಂತ ಅವನು ಖಿನ್ನನಾಗಿದ್ದ. "ನನ್ನನ್ನು ಬಿಟ್ಟೇಕೆ ಹೋದೆ ಸಿದ್ಧಾರ್ಥ?" ಎಂದವನು ಕೇಳಿದ. ಅದನ್ನು ಕೇಳಿ ಸಿದ್ಧಾರ್ಥ ಗೋವಿಂದನನ್ನು ತಬ್ಬಿಕೊಂಡ. ಕೈಗಳೆರಡನ್ನೂ ಅವನ ಕೊರಳಿಗೆ ಸುತ್ತಿದ. ಅವನನ್ನು ತನ್ನ ಸಮೀಪಕ್ಕೆ ಎಳೆದುಕೊಂಡು ಚುಂಬಿಸುತ್ತಿದ್ದಾಗ ಅವನು ಗೋವಿಂದನಾಗಿ ಉಳಿಯಲಿಲ್ಲ. ಸ್ತ್ರೀಯಾಗಿದ್ದಳು. ಅವಳ ಉದ್ದಂಗಿಯೊಳಗೆ ಕುಚಗಳೆರಡು ಬೆಳೆದು ಕಂಗೊಳಿಸಿದುವು. ಸಿದ್ಧಾರ್ಥ ಹಾಲು ಕುಡಿದ. ಅವಳ ಮೊಲೆಗಳ ಹಾಲು ಬಹಳ ಸವಿ. ಸ್ತ್ರೀಪುರುಷರು, ಸೂರ್ಯಚಂದ್ರರು, ಗುಡ್ಡಗಾಡು, ಹೂಹಣ್ಣು ಎಲ್ಲ ಸುಖ ಅದರಲ್ಲಡಕವಾಗಿತ್ತು. ಅದು ತುಂಬಾ ಅಮಲುಕರ. ಸಿದ್ಧಾರ್ಥನಿಗೆ ಎಚ್ಚರವಾದಾಗ ಗುಡಿಸಲಿನ ತೆರೆದ ಬಾಗಿಲಿನ ಮೂಲಕ ಭರದಿಂದ ಹರಿವ ನದಿ ಕಾಣಿಸಿತು. ಕಾಡಿನಿಂದ ಒಂದು ಗೂಗೆಯ ಕೂಗು ಕೇಳಿಸಿತು.

ಅರುಣೋದಯದ ಹೊತ್ತಿನಲ್ಲೇ, ತನ್ನನ್ನು ಹೊಳೆ ದಾಟಿಸಬೇಕೆಂದು ಸಿದ್ಧಾರ್ಥ ಆ ಕಡವಿನ ಅಂಬಿಗನಿಗೆ ತಿಳಿಸಿದ. ತನ್ನ ಬಿದಿರಿನ ತೆಪ್ಪದಲ್ಲಿ ದೋಣಿಕಾರ ದಾಟಿಸಿದ. ಮುಂಜಾನೆಯ ಬೆಳಕಿಗೆ ಹೊಳೆ ನೀರು ಪಾಟಲ ವರ್ಣದಿಂದ ಹೊಳೆಯುತ್ತಿತ್ತು.

"ಈ ನದಿ ಬಹಳ ಸುಂದರವಾಗಿದೆ" ಎಂದು ಸಿದ್ಧಾರ್ಥ ತನ್ನ ಸಂಗಾತಿಗೆ ಹೇಳಿದ.

ಅಂಬಿಗ ಹೇಳಿದ : "ಹೌದು. ಬಹಳ ಸುಂದರ ನದಿ. ನನಗೆ ಎಲ್ಲಕ್ಕಿಂತಲೂ ಇದರ ಮೇಲೆ ಬಹಳ ಪ್ರೇಮ. ಅನೇಕ ಸಲ ಇದನ್ನೇ ನೋಡಿರುವೆ. ಅದರ ಮಾತಿಗೆ ಕಿವಿಗೊಟ್ಟಿರುವೆ. ಅದರಿಂದ ನಾನು ಬಹಳ ಸಂಗತಿಗಳನ್ನು ಕಲಿತಿದ್ದೇನೆ. ನದಿಯಿಂದ ಕಲಿಯುತಕ್ಕ ವಿಷಯ ಬಹಳವಿದೆ."

ಸಿದ್ಧಾರ್ಥ ಆಚೆಯ ದಡದಲ್ಲಿ ಇಳಿಯುತ್ತ ಹೇಳಿದ: "ಉಪಕಾರ ಸ್ನೇಹಿತರೆ. ನಿನಗೆ ಕಡವಿನ ಕಾಸು ಕೊಡಲು ಏನೂ ಇಲ್ಲ. ನನಗೆ ಮನೆಯಿಲ್ಲ ಮಾರಿಲ್ಲ; ಬ್ರಾಹ್ಮಣನ ಮಗ; ಸನ್ಯಾಸಿ."

"ನನಗೆ ಗೊತ್ತಾಗುತ್ತದೆ" ಎಂದ ದೋಣಿಕಾರ. ಮತ್ತೆ ಮಾತು ಮುಂದುವರಿಸಿದ: "ನಿನ್ನಿಂದ ನಾನು ಏನನ್ನೂ ಅಪೇಕ್ಷಿಸಿಲ್ಲ. ಇನ್ನೊಮ್ಮೆ ಯಾವಾಗಲಾದರೂ ನೀನು ಕೊಡುತ್ತೀ."

"ನೀನು ಹಾಗೆ ನಂಬುತ್ತೀ?"

"ಹೌದು. ನಾನು ಅದನ್ನೂ ಈ ನದಿಯಿಂದಲೇ ತಿಳಿದುಕೊಂಡಿದ್ದೇನೆ. ಪ್ರತಿಯೊಂದು ಮರಳಿ ಬಂದೇಬರುತ್ತದೆ. ಸನ್ಯಾಸಿಯಾದ ನೀನೂ ಮತ್ತೆ ಬರುತ್ತೀ. ಒಳ್ಳೇದು, ಹೋಗಿಬಾ! ನಿನ್ನ ಸ್ನೇಹವೇ ಕಡವಿನ ಕಾಸಾಗಲಿ! ನೀನು ದೇವತೆಗಳಿಗೆ ಯಾಗಯಜ್ಞ ಮಾಡುವಾಗ ನನ್ನನ್ನು ನೆನಸಿಕೋ."

ನಗುತ್ತಾ ಇಬ್ಬರೂ ಬೀಳ್ಕೊಂಡರು. ಕಡವಿನವನ ಸ್ನೇಹದಿಂದ ಸಿದ್ಧಾರ್ಥ ತುಂಬಾ ಹರುಷಿತನಾದ. ಇವನು ಯಾವಾಗಲೂ ನಗುವ ಆ ಗೋವಿಂದನ ಹಾಗೆಯೇ. ದಾರಿಯಲ್ಲಿ ನಾನು ಯಾರನ್ನು ಭೆಟ್ಟಿಯಾಗುತ್ತೇನೋ ಅವರೆಲ್ಲ ಗೋವಿಂದನಂತೆಯೇ ಇರುವರಲ್ಲ! ಅವರ ಉಪಕಾರವನ್ನು ನಾನೇ ಸ್ಮರಿಸಬೇಕು! ಹಾಗಿದ್ದರೂ ಅವರೇ ನನ್ನ ಸೇವೆ ಮಾಡುತ್ತಾರಲ್ಲ! ಎಲ್ಲರೂ ವಿಧೇಯರು. ನನ್ನ ಮಿತ್ರತ್ವಕ್ಕೆ ಕಾತುರರು. ವಿಧೇಯರಾಗಿ ಸ್ವತಃ ವಿಚಾರ ಮಾಡುವದಿಲ್ಲ. ಜನರು ಮಕ್ಕಳೇ ಸರಿ.

ಮಧ್ಯಾಹ್ನದ ಹೊತ್ತಿಗೆ ಸಿದ್ಧಾರ್ಥ ಒಂದು ಹಳ್ಳಿ ಮುಟ್ಟಿದ. ಮಣ್ಣಿನ ಗುಡಿಸಲುಗಳ ಮುಂದಿನ ಸಣ್ಣ ಓಣಿಗಳಲ್ಲಿ ಮಕ್ಕಳು ಕುಣಿಯುತಿದ್ದರು. ಕುಂಬಳದ ಬೀಜಗಳಿಂದಲೂ ಅವರು ಆಡುತಿದ್ದರು. ಕೆಲವರು ಕೇಕೆ ಹೊಡೆಯುತಿದ್ದರು. ಇನ್ನು ಕೆಲವರು ಕುಸ್ತಿ ಹಿಡಿದಿದ್ದರು. ಆದರೆ ಈ ವಿಚಿತ್ರ ಯತಿಯನ್ನು ಕಂಡ ಕೂಡಲೆ ಓಡಿ ಹೋದರು. ಗ್ರಾಮದ ಕೊನೆಯಲ್ಲಿ ದಾರಿ ಒಂದು ತೊರೆಯ ದಂಡೆಯ ಮೇಲೆ ಹಾದು ಹೋಗುತಿತ್ತು. ಸಿದ್ಧಾರ್ಥ ಆ ಹಾದಿ ಹಿಡಿದು ಬಂದ. ಆ ಹಳ್ಳದ ಬದಿಯಲ್ಲಿ ಒಂದೆಡೆ ಒಬ್ಬಳು ತರುಣಿ ಬಗ್ಗಿ ಬಟ್ಟೆ ಒಗೆಯುತಿದ್ದಳು. ಸಿದ್ಧಾರ್ಥ ಅವಳನ್ನು

ಕಂಡು ನಮಸ್ಕಾರ ಮಾಡಿದ. ಕೂಡಲೆ ಅವಳು ತಲೆಯೆತ್ತಿಮುಗುಳು ನಗುತ್ತ ಅವನ ಕಡೆ ನೋಡಿದಳು. ಅವಳ ಶುಭ್ರ ಕಣ್ಣುಗಳು ಮಿಂಚುತಿದ್ದವು.

ಪ್ರಯಾಣಿಕರ ಪದ್ಧತಿಯಂತೆ ಆ ಯತಿಯು ಅವಳನ್ನು ಆಶೀರ್ವದಿಸಿ, ಅಲ್ಲಿಂದ ದೊಡ್ಡ ನಗರಕ್ಕೆ ಎಷ್ಟು ದೂರವಿದೆಯೆಂದು ಕೇಳಿದನು. ಅವಳು ನೆಟ್ಟಗೆ ನಿಂತು ಪುನಃ ಆ ಸನ್ಯಾಸಿಯನ್ನು ನೋಡಿದಳು. ಮತ್ತು ಕ್ಷಣ ಹೊತ್ತಿನ ಮೇಲೆ ಅವನಿದ್ದೆಡೆ ಬಂದಳು ಯೌವನದ ಆ ಮುಖದಲ್ಲಿ ಒದ್ದೆಯ ತುಟಿಗಳೆರಡೂ ಮನಮೋಹಕವಾಗಿದ್ದುವು. ತಿಳಿ ನಗೆಯಿಂದ ಅವಳು ಮಾತನಾಡುತ್ತ "ಊಟವಾಯಿತೇ?"ಎಂದು ಪ್ರಶ್ನಿಸಿದಳು. "ರಾತ್ರಿಯಲ್ಲಿ ಯತಿಗಳು ಕಾಡಿನಲ್ಲಿ ಮಲಗುವುದು ನಿಜವೇ? ಅವರು ಸ್ತ್ರೀಯರೊಂದಿಗೆ ಇರುವಂತಿಲ್ಲ ಎಂಬುದು ಸತ್ಯವೇ?" ಎಂದು ಕೇಳಿ ಅಪಹಾಸ್ಯ ಮಾಡಿದಳು. ಆ ಮೇಲೆ ತನ್ನ ಎಡಪಾದವನ್ನು ಅವನ ಬಲಪಾದದ ಮೇಲೆ ಇಟ್ಟು ಒತ್ತಿ, ಲತಾಬಂಧನದಾಲಿಂಗನ ಭೋಗ ಸುಖಕ್ಕೆ ಅವನನ್ನು ಆಮಂತ್ರಿಸುವಂತೆ ಸನ್ನೆ ಮಾಡಿದಳು. ಸಿದ್ಧಾರ್ಥನ ರಕುತ ಉಕ್ಕಿತು. ಅದೇ ಕ್ಷಣ ಅವನ ಕನಸೂ ನೆನಪಾಯಿತು. ಅವನು ಸ್ವಲ್ಪ ಬಗ್ಗಿ ಅವಳ ಸ್ತನಗಳ ತೊಟ್ಟುಗಳನ್ನು ಮುದ್ದಿಸಿದ. ಆ ಮೇಲೆ ತಲೆಯೆತ್ತಿ ಅವಳ ಮೋರೆ ನೋಡಿದ, ಕಾಮಾತುರದಿಂದ ಅವಳು ನಗುತಿದ್ದಳು. ಅವಳ ಅರೆದೆರೆದ ಕಣ್ಣುಗಳು ಕಾಮಸುಖಕ್ಕಾಗಿ ಹಂಬಲಿಸುತಿದ್ದುವು.

ಸಿದ್ಧಾರ್ಥ ಕೂಡಾ ಆಶಿಸಿದ. ಅವನಲ್ಲೂ ಕಾಮ ಕೆರಳಿತು. ಆದರೆ ಇಷ್ಟರವರೆಗೂ ಅವನು ಸ್ತ್ರೀಯರನ್ನು ಸ್ಪರ್ಶಿಸಿದವನಲ್ಲ. ಆದುದರಿಂದ ಸ್ವಲ್ಪ ಅಂಜಿದ. ಅವಳನ್ನು ಎರಡೂ ಕೈಗಳಿಂದ ಬಿಗಿಯಾಗಿ ಹಿಡಿದು ಆಲಿಂಗಿಸಬೇಕೆಂದೂ ಬಯಕೆಯಾಯಿತು. ಅಷ್ಟರಲ್ಲಿ "ಬೇಡ" ಎಂದು ಅವನ ಅಂತರ್ವಾಣಿ ನುಡಿಯಿತು. ತಕ್ಷಣ ಆ ಸ್ತ್ರೀಯ ಮೊಗದಾವರೆಯಲ್ಲಿ ತುಂಬಿದ್ದ ನಗುವಿನ ಮೋಹಜಾಲ ಜಾರಿತು. ಇಂದ್ರಿಯ ಸುಖಾಪೇಕ್ಷಿಯಾದ ಯುವತಿಯ ಬಯಕೆಯ ನೋಟವೊಂದೇ ಅವನಿಗೆ ಕಂಡಿತು. ಮೆಲ್ಲಗೆ ಅವನು ಅವಳ ಕನ್ನೆಗಳನ್ನು ಸವರಿ, ಆ ಹತಾಶೆ ಹೊಂದಿದ ಹೆಣ್ಣನ್ನು ಬಿಟ್ಟು, ಬಿದಿರ ಕಾಡನ್ನು ಹೊಕ್ಕು ಕಣ್ಮರೆಯಾದ.

ಅದೇ ದಿನ ಕತ್ತಲೆ ಪಸರಿಸುವ ಮೊದಲೇ ಅವನು ಒಂದು ದೊಡ್ಡ

ನಗರ ಸೇರಿದ. ಜನರೊಂದಿಗೆ ಬಾಳಲು ಅವನು ಬಯಸಿದುದರಿಂದ ಪಟ್ಟಣಕ್ಕೆ ಬರಲು ಅವನಿಗೆ ಸಂತೋಷವೇ ಆಯಿತು. ಅವನು ಕಾಡಿನಲ್ಲಿ ವಾಸಿಸ ತೊಡಗಿ ಬಹುಕಾಲವಾಗಿದೆ. ಗುಡಿಸಲಿನಲ್ಲಿ ಮಲಗಿದುದು ಅದೇ, ಆ ದೋಣಿಗಾರನ ಮನೆಯಲ್ಲೇ ಸರಿ.

ಆ ನಗರದ ಹೊರಗೆ, ಬೇಲಿ ಹಾಕದ ಒಂದು ತೋಪಿನ ಬಳಿ, ತಲೆಯ ಮೇಲೆ ತುಂಬಿದ ಬುಟ್ಟಿಗಳನ್ನು ಹೊತ್ತ ಸ್ತ್ರೀಪುರುಷ ಭೃತ್ಯರನ್ನು ಈ ತಿರುಕ ಇದಿರಾದ. ಆ ಸೇವಕರ ಸಾಲಿನ ಮಧ್ಯದಲ್ಲಿ ನಾಲ್ಕು ಜನರು ಒಂದು ಪಲ್ಲಕಿಯನ್ನು ಹೊತ್ತಿದ್ದರು ನಾನಾ ಬಣ್ಣಗಳಿಂದಲೂ ರತ್ನಗಂಬಳಿಯಿಂದಲೂ ಕಂಗೊಳಿಸುವ ಆ ಪಲ್ಲಕಿಯಲ್ಲಿ ರಮಣಿಯೊಬ್ಬಳು ಕುಳಿತಿದ್ದಳು. ತೋಪಿನ ದ್ವಾರದಲ್ಲಿ ಸಿದ್ಧಾರ್ಥ ಆ ಮೆರವಣಿಗೆಯನ್ನು ನೋಡುತ್ತ ನಿಂತ. ಅವನು ಪಲ್ಲಕಿಯನ್ನೂ ಅದರಲ್ಲಿ ಕುಳಿತಿದ್ದ ಆ ಕಣ್ಮಣಿಯನ್ನೂ ಕಂಡ. ತುಂಬಿದ ಅವಳ ತಲೆಗೂದಲು ಬಹಳ ಶೋಭಾಯಮಾನವಾಗಿದ್ದಿತು. ಅವಳ ಮೊಗವು ಚಂದ್ರನಂತೆ ಕಾಂತಿಯುಕ್ತ. ಮೋರೆಯೂ ಮಧುರವೇ. ಸೂಕ್ಷ್ಮ, ಚುರುಕು ಬುದ್ಧಿಯ ಜಾಣತನ ಅಲ್ಲಿ ಮನೆ ಮಾಡಿತ್ತು. ಈಗ ತಾನೇ, ಕೊಯ್ದ ಅಂಜೂರದಂತಹ ತುಟಿಗಳು. ಕಲಾತ್ಮಕವಾಗಿ ತಿದ್ದಿದ ಹುಬ್ಬುಗಳು. ತುಂಬಿಯಂಥ ಕಣ್ಣುಗಳು. ಹಸುರು ಮತ್ತು ಹೊನ್ನ ವರ್ಣದ ಕುಬಸದ ಮೇಲೆ ನೀಳವಾದ ಮೃದು ಗೋಣು. ಆ ಸ್ತ್ರೀಯ ಕೈಗಳು ಬಲವಾಗಿಯೂ ಮೃದುವಾಗಿಯೂ ಬೆರಳುಗಳು ನೀಳ ಮತ್ತು ಕೋಮಲವಾಗಿಯೂ ತೋರಿದುವು. ಕೈಗೆ ಚಿನ್ನದ ಬಳೆಗಳನ್ನು ಹಾಕಿಕೊಂಡಿದ್ದಳು.

ಅವಳ ರೂಪಲಾವಣ್ಯವನ್ನು ಸಿದ್ಧಾರ್ಥ ನೋಡಿದ. ನೋಡಿ ಆನಂದದಿಂದ ಅವನ ಹೃದಯ ನಲಿಯಿತು. ಅವಳ ಪಲ್ಲಕಿ ತನ್ನ ಸಮೀಪ ಹಾದು ಹೋದಾಗ ಸಿದ್ಧಾರ್ಥ ಶಿರಬಾಗಿ ವಂದಿಸಿದ. ಆ ಕೂಡಲೆ ಮತ್ತೆ ತಲೆಯೆತ್ತಿ ಅವಳ ಅಂದವಾದ ಮುಖವನ್ನೂ ಕಣ್ಣುಗಳನ್ನೂ ದಿಟ್ಟಿಸಿದ. ಅವಳು ಹಾದು ಹೋದಾಗ ಗಾಳಿಯಲ್ಲಿ ಲೀನವಾದ ಸುಗಂಧದ್ರವ್ಯಗಳ ಸುಖಸುವಾಸನೆಯನ್ನು ಆಘ್ರಾಣಿಸಿದ. ಅವನನ್ನು ಕಂಡ ಆ ಸುಂದರ ಸ್ತ್ರೀ ತಲೆ ಅಲ್ಲಾಡಿಸಿ, ನಗೆ ಸುಖವನ್ನೂ ಸೂಚಿಸಿದಳು ಆ ಮೇಲೆ ತೋಟದೊಳಗೆ ಆ ಮೆರವಣಿಗೆ ಹೊಕ್ಕು, ಹೋಯಿತು

ಹಾ! ಈ ನಗರಕ್ಕೆ ಪ್ರವೇಶಿಸಿದಾಗ ಒಳ್ಳೇ ಶುಭ ಶಕುನವಾಯಿತು ಎಂದೆಂದುಕೊಂಡ ಸಿದ್ಧಾರ್ಥ. ಕೂಡಲೇ ಆ ತೋಟದೊಳಗೆ ಹೋಗ ಬೇಕೆಂದು ಅವನಿಗೂ ಬಲವಾದ ಆಶೆಯಾಯಿತು. ಆದರೆ ಆ ನಾರೀಮ ಣಿಯ ಭೃತ್ಯರೂ ತೊತ್ತುಗಳೂ ತನ್ನನ್ನು ಬಹಳ ತಾತ್ಸಾರದಿಂದಲೂ ಅಪ ನಂಬಿಗೆಯಿಂದಲೂ ವಕ್ರನೋಟದಿಂದ ನೋಡಿದುದನ್ನು ಥಕ್ಕನೇ ನೆನಪು ಮಾಡಿಕೊಂಡ.

ನಾನಿನ್ನೂ ಯತಿ. ಸನ್ಯಾಸಿ. ಭಿಕ್ಷುಕ. ಹೀಗೆ ಇರಲಾರೆ. ಹೀಗಿದ್ದು ತೋಟದೊಳಗೆ ಹೋಗಲಾರೆ ಎಂದೆಂದುಕೊಂಡ ಸಿದ್ಧಾರ್ಥ ನಕ್ಕ.

ದಾರಿಯಲ್ಲಿ ಭೆಟ್ಟಿಯಾದ ಜನರೊಡನೆ ಆ ತೋಟದ ಮತ್ತು ಆ ರೂಪ ರಾಣಿಯ ಹೆಸರನ್ನು ಕೇಳಿದ. ಅದು ಅವಳದೇ ತೋಟ. ಇದಲ್ಲದೆ ನಗರ ದಲ್ಲಿ ಅವಳದೊಂದು ಸ್ವಂತ, ದೊಡ್ಡಮನೆಯೂ ಇದೆ. ಅವಳು ಗಣಿಕೆ (ವಾರಾಂಗನೆ) ಕಮಲಾ.

ಆ ಮೇಲೆ ಸಿದ್ಧಾರ್ಥ ನಗರಕ್ಕೆ ಪ್ರವೇಶಿಸಿದ. ಅವನ ಗುರಿಯೊಂದೇ. ಅವರ ಬೆನ್ನು ಹಿಡಿದು ಬಂದ ಅವನು ನಗರದ ಸಿಂಹಾವಲೋಕನ ಮಾಡಿದ. ರಸ್ತೆಗಳಲ್ಲಿ ಓಡಾಡಿದ. ಕೆಲವು ಸ್ಥಳಗಳಲ್ಲಿ ಕಲ್ಲಂಬದಂತೆ ನಿಂತ. ನದಿಗೆ ಇಳಿವ ಕಲ್ಲು ಪಾವಟಿಗೆಗಳಲ್ಲಿ ಕುಳಿತ. ಸಂಧ್ಯಾ ಸಮಯದೊಳಗೆ ಒಬ್ಬ ಕ್ಷೌರಿಕನೊಡನೆ ಸ್ನೇಹ ಬೆಳೆಸಿದ. ಅದೇ ಹಜಾಮನನ್ನೂ ಮತ್ತೆ ವಿಷ್ಣುದೇವ ಸ್ಥಾನದಲ್ಲೂ ಕಂಡ. ಮತ್ತು ಅವನು ಹೇಳಿದ ಲಕ್ಷ್ಮೀ-ನಾರಾಯಣನ ಮಹಿಮೆ ಯ ಅನೇಕ ಶೃಂಗಾರ ಕತೆಗಳನ್ನು ಕೇಳಿದ. ರಾತ್ರಿ ಸಿದ್ಧಾರ್ಥ ನದಿಯ ದಡದ ಬದಿ ಗೂಟಕ್ಕೆ ಕಟ್ಟಿದ ತೇಲುವ ದೋಣಿಯೊಂದರಲ್ಲಿ ಮಲಗಿ ನಿದ್ದೆ ಹೋದ. ಮುಂಜಾನೆ ಎಲ್ಲರಿಗಿಂತ ಮೊದಲೇ ಎದ್ದು ಆ ಕ್ಷೌರಿಕನ ಮನೆಗೆಹೋಗಿ ಗಡ್ಡವನ್ನು ಬೋಳಿಸಿಕೊಂಡ. ತಲೆಗೂದಲಿಗೆ ಎಣ್ಣೆಹಾಕಿ, ತಿಕ್ಕಿ, ಸವರಿ, ಬಾಚಿಸಿಕೊಂಡ. ಆ ಮೇಲೆ ಸ್ನಾನಕ್ಕೆ ನದಿಗೆ ಹೊರಟು ಹೋದ.

## ೬ನೆಯ ಅಧ್ಯಾಯ

ಸಂಜೆ ಚೆಲುವಮ್ಮಣ್ಣಿ ಕಮಲಾ, ಪಲ್ಲಕಿಯಲ್ಲಿ ಕುಳಿತು ಆ ವನಕ್ಕೆ

ಬಂದಾಗ ಸಿದ್ಧಾರ್ಥ ಅವರ ಬಾಗಿಲಲ್ಲಿ ನಿಂತಿದ್ದ. ಅವಳನ್ನು ಕಂಡೊಡನೆಯೇ ಶಿರಬಾಗಿ ವಂದಿಸಿದ. ಮೆರವಣಿಗೆಯ ಕೊನೆಯಲ್ಲಿದ್ದ ಸೇವಕನನ್ನು ಸಿದ್ಧಾರ್ಥ ಸನ್ನೆಯಿಂದ ತನ್ನ ಬಳಿಗೆ ಕರೆದು, "ತರುಣ ಬ್ರಾಹ್ಮಣನೊಬ್ಬ ಮಾತನಾಡಲು ಬಯಸುತ್ತಾನೆಂದು ನಿನ್ನ ಯಜಮಾನಿನಿಗೆ ತಿಳಿಸು" ಎಂದು ಹೇಳಿದನು. ಸ್ವಲ್ಪ ಹೊತ್ತಿನ ಮೇಲೆ ಆ ಸೇವಕನು ಮರಳಿ, ಸಿದ್ಧಾರ್ಥ ನನ್ನು ಕರೆದೊಯ್ದ. ಒಂದು ಮಂಟಪದಲ್ಲಿ ಕಮಲಾ ಪಲ್ಲಂಗದ ಮೇಲೆ ಕುಳಿತಿದ್ದಳು.

ಆ ಭೃತ್ಯನು ಹೊರಟು ಹೋದ ತರುವಾಯ "ನಿನ್ನೆ ನೀನು ಇದೇ ವನದ ಬಳಿ ನಿಂತು ನನ್ನನ್ನು ವಂದಿಸಿದೆಯಲ್ಲವೇ ? " ಎಂದು ಕಮಲಾ ಕೇಳಿದಳು.

"ಹೌದು, ನಿನ್ನೆ ನಾನು ನಿನ್ನನ್ನು ನೋಡಿದೆ, ಮತ್ತು ನಮಸ್ಕರಿಸಿದೆ."

"ನಿನ್ನೆ ಗಡ್ಡ ಮತ್ತು ಉದ್ದವಾದ ತಲೆಗೂದಲು ಇದ್ದಿತಲ್ಲವೇ ? ಕೂದಲು ತುಂಬಾ ದೂಳೂ ಇತ್ತು !''

" ನಿಜ. ನೀನು ಸರಿಯಾಗಿ ನೋಡಿದ್ದೀಯಾ ನೀನು ಎಲ್ಲವನ್ನು ಕಂಡಿರುವೆ. ಯತಿಯಾಗುವ ಇಚ್ಛೆಯಿಂದ ಮನೆಬಿಟ್ಟು ಕಾಡಿಗೆ ತೆರಳಿ, ಅಲ್ಲಿ ಮೂರು ವರುಷಗಳ ವರೆಗೆ ಯತಿಯಾಗಿದ್ದ ಬ್ರಾಹ್ಮಣ ಪುತ್ರನಾದ ಸಿದ್ಧಾರ್ಥನನ್ನು ನೀನು ನೋಡಿದ್ದೆ. ಆದರೆ ಈಗ ನಾನು ಆ ಮಾರ್ಗವನ್ನು ಬಿಟ್ಟಿದ್ದೇನೆ. ಮತ್ತು ಈ ನಗರಕ್ಕೆ ಬಂದಿದ್ದೇನೆ. ಈ ಪಟ್ಟಣಕ್ಕೆ ಪ್ರವೇಶಿಸುವ ಮೊದಲು ನಾನು ನಿನ್ನನ್ನೇ ಕಂಡೆ. ಕಮಲಾ, ನಾನು ಈ ಒಂದು ಮಾತನ್ನು ಹೇಳಲು ಇಲ್ಲಿಗೆ ಬಂದೆ. ಸಿದ್ಧಾರ್ಥ ಇಷ್ಟರ ವರೆಗೆ ಸ್ತ್ರೀಯರೊಡನೆ ಮಾತನಾಡುತ್ತಿದ್ದಾಗ ಕೆಳಗೆ ನೋಡುತ್ತಿದ್ದ. ತಲೆ ಬಗ್ಗಿಸದೇ ಇದ್ದ ಮೊದಲನೇ ಪ್ರಸಂಗ ಇದೇ. ಆದರೆ ಇನ್ನು ಮುಂದೆ ಸುಂದರ ಸ್ತ್ರೀಯನ್ನು ನೋಡಿದಾಗ ಎಂದೂ ಕೆಳಮುಖ ಮಾಡಲಾರೆ."

ಕಮಲಾ ಮುಗುಳು ನಗು ಬೀರಿದಳು. ನವಿಲಿನ ಗರಿಯಿಂದ ರಚಿಸಿದ ಬೀಸಣಿಗೆಯಿಂದ ಗಾಳಿ ಬೀಸಿಕೊಳ್ಳುತ್ತ ಹೇಳಿದಳು. "ಇದನ್ನಷ್ಟೇ ಹೇಳಲು ಸಿದ್ಧಾರ್ಥ ಬಂದನೇನು ?"

ಸಿದ್ಧಾರ್ಥ ಉತ್ತರವಿತ್ತ: "ಇದನ್ನು ಹೇಳಲು ಬಂದೆ. ಅಲ್ಲದೆ ನೀನು

ಬಹಳ ಚೆಲುವೆಯಾಗಿರುವುದರಿಂದ ನಿನ್ನನ್ನೂ ಅಭಿವಂದಿಸಲು ಬಂದೆ. ನಿನಗೆ ಅಪ್ರಿಯವೆನಿಸದಿದ್ದರೆ ಇನ್ನೊಂದು ಪ್ರಶ್ನೆ ಕೇಳಬೇಕೆಂದಿದ್ದೇನೆ. ನೀನು ನನ್ನ ಸಖಿಯಾಗು. ನನ್ನ ಗುರುವಾಗು. ಏಕೆಂದರೆ ನೀನು ಚೆನ್ನಾಗಿ ಬಲ್ಲ ಕಲೆಯ ವಿಷಯ ನನಗೇನೂ ಗೊತ್ತಿಲ್ಲ ”

ಸಿದ್ಧಾರ್ಥನ ಮಾತು ಕೇಳಿ ಕಮಲಾ ಗಟ್ಟಿಯಾಗಿ ನಗತೊಡಗಿದಳು.

“ಕಾಡಿನ ಯತಿಯೊಬ್ಬ ಬಂದು ನನ್ನಿಂದ ಶಿಕ್ಷಣ ಹೊಂದ ಬಯಸಿ ದುದನ್ನು ಇಂದೇ ಕೇಳಿದೆ. ಇಂಥ ಅನುಭವ ನನಗಿಲ್ಲ. ಇಷ್ಟರ ವರೆಗೂ ಉದ್ದ ತಲೆಗೂದಲು, ಹಳೇ ಕೌಪೀನ ಧರಿಸಿ ಯಾವ ಯತಿಯೂ ನಾನಿದ್ದಲ್ಲಿ ಬಂದಿಲ್ಲ. ನನ್ನ ಬಳಿ ಅನೇಕ ತರುಣರು ಬರುತ್ತಿರುತ್ತಾರೆ. ಅವರಲ್ಲಿ ಬ್ರಾಹ್ಮಣರ ಪುತ್ರರೂ ಇದ್ದಾರೆ. ಆದರೆ ಅವರೆಲ್ಲ ಅಂದವಾದ ಅಲಂಕಾರ ಗಳನ್ನು ಮಾಡಿಕೊಂಡು ಬರುತ್ತಿರುವರು. ಕಾಲುಗಳಿಗೆ ಸುಂದರವಾದ ಪಾದರಕ್ಷೆಗಳನ್ನು ಹಾಕಿಕೊಳ್ಳುವರು. ಅವರ ತಲೆಗೂದಲು ಸುಗಂಧ ದ್ರವ್ಯ ಗಳ ಸುವಾಸನೆಯಿಂದ ಗಮಗಮಿಸುತ್ತಿರುತ್ತಿದೆ. ಜೇಬುಗಳಲ್ಲಿ ಹಣ ತುಂಬಿರುತ್ತದೆ. ಓ ಯತಿಯೇ! ನನ್ನ ಹತ್ತಿರ ಬರುವ ತರುಣರೆಲ್ಲ ಈ ರೀತಿ ಬರುತ್ತಾರೆ” ಎಂದು ಕಮಲಾ ನುಡಿದಳು.

ಸಿದ್ಧಾರ್ಥನೆಂದ: “ನಿನ್ನಿಂದ ನಾನು ಈಗಾಗಲೇ ಕಲಿತುಕೊಳ್ಳಲು ಆರಂಭಿಸಿದೆ. ನಿನ್ನೆ ಕೂಡಾ ಸ್ವಲ್ಪ ತಿಳಿದುಕೊಂಡೆ. ನನ್ನ ಗಡ್ಡ ತೆಗೆಸಿದೆ. ತಲೆ ಬಾಚಿ ಎಣ್ಣೆ ಸವರಿಕೊಂಡೆ. ಸುಗುಣೇ! ನನ್ನಲ್ಲಿಲ್ಲದ ವಸ್ತುಗಳು ಬಹಳವಿಲ್ಲ. ಅಂದವಾದ ಬಟ್ಟೆಬರೆ, ಪಾದರಕ್ಷೆ, ಹಣ ಇವೇ ? ಇಂಥ ಕ್ಷುಲ್ಲಕ ವಸ್ತುಗಳಿಗಿಂತಲೂ ಗಹನವಾದುದನ್ನು ಸಾಧಿಸಲು ಸಿದ್ಧಾರ್ಥ ಎಳಸಿದ ಮತ್ತು ಅವನ್ನು ಸಾಧಿಸಿದ. ನಿನ್ನ ಸ್ನೇಹ ಗಳಿಸಿ ನಿನ್ನಿಂದ ಪ್ರೇಮ ಸುಖವನ್ನು ಕಲಿತುಕೊಳ್ಳಬೇಕೆಂದು ನಿನ್ನೆ ನಿರ್ಧರಿಸಿದೆ. ಅದನ್ನು ನಾನೇಕೆ ಸಾಧಿಸಿಕೊಳ್ಳಕೂಡದು. ಕಮಲಾ! ನಾನು ನಿನ್ನ ಪರಮ ಶಿಷ್ಯನಾಗುವುದ ರಲ್ಲಿ ಸಂದೇಹವಿಲ್ಲ. ನೀನು ಕಲಿಸಲಿರುವ ವಿಷಯಗಳಿಗಿಂತಲೂ ಕಠಿನವಾ ದುದನ್ನು ನಾನು ಅಭ್ಯಾಸ ಮಾಡಿದ್ದೇನೆ. ಸುಂದರವಾದ ಬಟ್ಟೆ, ಪಾದರಕ್ಷೆ, ಹಣವಿಲ್ಲದೇ ಇದ್ದರೆ ಸಿದ್ಧಾರ್ಥ ನಿನಗೆ ಚೆನ್ನಾಗಿಲ್ಲ, ಅಲ್ಲಾ !”

ಕಮಲಾ ನಗುತ್ತ ಹೇಳಿದಳು: “ಅವನು ಇನ್ನೂ ಚೆನ್ನಾಗಿಲ್ಲ. ಬಟ್ಟೆ

ಬರೆ, ಒಳ್ಳೇ ಬಟ್ಟೆಬರೆ, ಪಾದರಕ್ಷೆ, ಒಳ್ಳೇ ಪಾದರಕ್ಷೆ, ಕಿಸೆ ತುಂಬಾ ಹಣ ಮತ್ತು ಕಮಲೆಗೆ ವಿಶೇಷ ಇನಾಮುಗಳು ಇವೆಲ್ಲ ಅವನಲ್ಲಿ ಇರಲೇಬೇಕು. ಕಾಡಿನಿಂದ ಬಂದ ಯತಿಗೆ ಈಗಲಾದರೂ ತಿಳಿಯಿತೇ ? ನಿನಗೆ ಅರ್ಥ ವಾಯಿತೇ ?"

"ಚೆನ್ನಾಗಿ ಅರ್ಥವಾಯಿತು. ಇಂತಹ ಬಾಯಿಂದ ಬಂದ ಮಾತು ಗಳನ್ನು ತಿಳಿದುಕೊಳ್ಳಲಾರೆನೇ ? ಕಮಲಾ, ನಿನ್ನ ಬಾಯಿ ಈಗ ಕೊಯ್ದ ಅಂಜೂರದಂತಿದೆ. ನನ್ನ ತುಟಿಗಳೂ ಬಹಳ ಕೆಂಪಗಿವೆ. ಹೊಸ, ಹಸಿಬಿಸಿ. ನಿನ್ನ ತುಟಿಗಳಿಗೆ ಒಪ್ಪುವ ಜೋಡಣೆ. ನೀನೇ ನೋಡುವಿಯಂತೆ. ಆದರೆ ಸುಂದರಾಂಗನೆಯೇ! ಪ್ರೇಮ ಪಾಠಕ್ಕಾಗಿ ಕಾಡಿನಿಂದ ಬಂದ ಈ ಯತಿ ಯನ್ನು ಕಂಡು ನಿನಗೆ ಭಯವಾಗುವುದಿಲ್ಲವೇ ?"

"ಯತಿ, ಕಾಡಿನಿಂದ ಬಂದ ಒಬ್ಬ ಮೂರ್ಖ ಯತಿಯನ್ನು ಕಂಡು ನಾನೇಕೆ ಹೆದರಬೇಕು. ಅವನಿಗೆ ನರಿಗಳ ಬಗ್ಗೆ ಗೊತ್ತು. ಸ್ತ್ರೀಯರನ್ನು ಅವನೇನು ಬಲ್ಲ ?''

"ಓಹೋ ! ಯತಿ ಬಹಳ ಬಲಿಷ್ಠ. ಅವನಿಗೆ ಯಾವುದರ ಭೀತಿಯೂ ಇಲ್ಲ. ಸುಂದರಿಯೇ! ಅವನು ಬಲಾತ್ಕಾರ ಮಾಡಬಹುದು, ನಿನ್ನನ್ನು ಸುಲಿಯಬಹುದು. ಹೊಡೆಯಬಹುದು."

"ಇಲ್ಲ, ಇಲ್ಲ, ನನಗೆ ಅಂಜಿಕೆಯಿಲ್ಲ. ಯಾರಾದರೂ ಬಂದು ತನ್ನನ್ನು ಹೊಡೆದು ಬಡೆದು ತನ್ನ ಜ್ಞಾನ, ಪಾವಿತ್ರ್ಯ, ವಿಚಾರ ಶಕ್ತಿಗಳನ್ನು ದೋಚಿ ಕೊಂಡು ಹೋಗಬಹುದೆಂದು ಯಾವ ಬ್ರಾಹ್ಮಣ ಅಥವಾ ಯತಿ ಎಂದಾ ದರೂ ಭಯಗ್ರಸ್ತನಾಗಿರುವನೇ ? ಎಂದೆಂದೂ ಇಲ್ಲ. ಏಕೆಂದರೆ ಅವೆಲ್ಲ ಅವನೊಳಗಿರುವ ವಸ್ತುಗಳು. ತಾನು ಬಯಸಿದರೆ, ಬಯಸಿದಷ್ಟು ಪರರಿಗೆ ಕೊಡಬಲ್ಲ. ಕಮಲೆಯ ಪರಿಸ್ಥಿತಿಯಾದರೂ ಅಷ್ಟೆ. ಪ್ರೇಮಸುಖವೂ ಹಾಗೆಯೇ. ಕಮಲೆಯ ತುಟಿಗಳು ಕೆಂಪಗೆ ಮತ್ತು ಅಂದಚಂದ ವಾಗಿವೆ. ಆದರೆ ಅವಳ ಇಚ್ಛೆಯ ವಿರುದ್ಧ ಅವಳನ್ನು ಮುದ್ದಿಡಲು ಯತ್ನಿಸು. ಅದ ರಿಂದ ಯಾವ ಸವಿಯೂ ಲಭಿಸಲಾರದು. ಸಿದ್ಧಾರ್ಥ! ನೀನು ಯೋಗ್ಯ ಶಿಷ್ಯ. ಆದುದರಿಂದ ಅದನ್ನು ತಿಳಿದುಕೋ. ಯಾರಾದರೊಬ್ಬನು ಕಾಡಿ, ಬೇಡಿ, ಕೊಂಡು, ಪಡೆದು ಅಥವಾ ರಸ್ತೆಯ ಬದಿಗಳಲ್ಲೂ ಪ್ರೇಮ ಕಾಣ

ಬಹುದು. ಆದರೆ ಅದನ್ನು ಎಂದೆಂದೂ ಕದಿಯಲಾಗದು. ನಿನ್ನ ವಿಚಾರ ತಪ್ಪು. ಹೌದು, ನಿನ್ನಂತಹ ಸುಂದರ ತರುಣನು ತಪ್ಪಾಗಿ ತಿಳಿದುಕೊಂಡರೆ ಅದು ಕರುಣಾಜನಕವೇ ಸರಿ"

ಸಿದ್ಧಾರ್ಥ ಶಿರಬಾಗಿಸಿ ವಂದಿಸಿದ. ಆ ಮೇಲೆ ಮುಗುಳು ನಕ್ಕುನುಡಿದ: "ಕಮಲಾ! ನೀನು ಹೇಳಿದುದು ನಿಜ. ಅದು ಕರುಣಾಜನಕ. ಅತ್ಯಂತ ದುಃಖದಾಯಕ. ನಿನ್ನ ಅಥವಾ ನನ್ನ ತುಟಿಗಳ ಮಾಧುರ್ಯದಲ್ಲಿ ಒಂದು ಹನಿಯೂ ನಷ್ಟವಾಗಬಾರದು. ಉತ್ತಮ ವಸ್ತ್ರ, ಪಾದರಕ್ಷೆ, ಧನ ಇತ್ಯಾದಿ ಸಿದ್ಧಾರ್ಥನಲ್ಲಿ ಯಾವುವು ಇಲ್ಲವೋ ಅವನ್ನು ಗಳಿಸಿದ ಮೇಲೆ ಸಿದ್ಧಾರ್ಥ ಮತ್ತೆ ಬರುತ್ತಾನೆ. ಅದರೆ ಲಾವಣ್ಯವತಿಯೇ, ನನಗೇನಾದರೂ ಸ್ವಲ್ಪ ಸಲಹೆಗಳನ್ನೂ ಕೊಡಲಾರೆಯಾ?''

"ಸಲಹೆ? ಯಾಕೆ ಕೊಡಲಾರೆ? ಕಾಡಿನಿಂದ ಬಂದ ಬಡ, ಅಜ್ಞಾನಿ, ಯತಿಗೆ ಯಾರು ಪ್ರೀತಿಯಿಂದ ಸಲಹೆ ಕೊಡಲಾರರು?"

"ಆ ಮೂರು ವಸ್ತುಗಳನ್ನು ಆದಷ್ಟು ಬೇಗನೇ ಗಳಿಸಲು ನಾನೆಲ್ಲಿ ಹೋಗಲಿ ಹೇಳು."

"ಮಿತ್ರಾ! ಅನೇಕರು ಇದನ್ನೇ ಕೇಳುತ್ತಾರೆ. ನೀನು ನಿನ್ನಲ್ಲಿರುವ ವಿದ್ಯೆಯಿಂದ ಹಣ, ಬಟ್ಟೆ, ಪಾದರಕ್ಷೆ ಮೊದಲಾದವುಗಳನ್ನು ಗಳಿಸಬೇಕು. ಬಡವರಿಗೆ ಬೇರೆ ಉಪಾಯವಿಲ್ಲ.''

"ಕಮಲಾ! ನಾನು ವಿಚಾರಮಾಡಬಲ್ಲೆ. ಉಪವಾಸ ಮಾಡಬಲ್ಲೆ. ಬಹಳ ಸ್ಥೈರಣೆಯೂ ಇದೆ.''

"ಮತ್ತೆ?"

"ಮತ್ತೇನೂ ಇಲ್ಲ. ಓಹೋ, ಮರೆತೆ. ಕವನಗಳನ್ನು ಕಟ್ಟಬಲ್ಲೆ. ನಾನೊಂದು ಕವಿತೆ ರಚಿಸಿ ಹಾಡಿದರೆ ಅದಕ್ಕಾಗಿ ಒಂದು ಮುದ್ದು ಕೊಡು ವೆಯಾ?"

"ನಿನ್ನ ಕವನದಿಂದ ನನಗೆ ಸಂತೋಷವಾದರೆ ಕೊಡಬಲ್ಲೆ. ಅದರ ಹೆಸರೇನು?"

ಸಿದ್ಧಾರ್ಥ ಒಂದು ಕ್ಷಣ ಯೋಚಿಸಿ ಮಧುರವಾದ ದನಿಯಿಂದ ಒಂದು ಕವನವನ್ನು ಹಾಡಿದ. "ರೂಪವತಿಯಾದ ಕಮಲಾ ತನ್ನ ವನಕ್ಕೆ

ಹೋದಳು. ವನದ ಬಾಗಿಲಲ್ಲಿ ಯತಿ ನಿಂತುಕೊಂಡಿದ್ದ. ಆ ಕಮಲ ಮುಖಿಯನ್ನು ಕಂಡ ಕೂಡಲೇ ಅವನು ಶಿರಬಾಗಿ ವಂದಿಸಿದ. ಮುಗುಳು ನಕ್ಕು ಅವನ್ನು ಅವಳು ಶಿರಸಾವಹಿಸಿದಳು. ದೇವತೆಗಳಿಗೆ ಯಾಗಯಜ್ಞ ಮಾಡುವುದಕ್ಕಿಂತ ಈ ಸುಂದರಿಯಾದ ಕಮಲೆಯ ಪ್ರೇಮಪೂಜಾರಿಯಾಗುವುದೇ ಒಳ್ಳೇದೆಂದು ಆ ತರುಣ ಸನ್ಯಾಸಿ ಯೋಚಿಸಿದ'' ಎಂಬ ಅರ್ಥವಿತ್ತು ಆ ಹಾಡಿಗೆ.

ಕಮಲಾ ಗಟ್ಟಿಯಾಗಿ ಚಪ್ಪಾಳೆ ಬಡೆದಳು. ಆಗ ಅವಳ ಬಂಗಾರ ಬಳೆಗಳ ಕಿಣಿ ಕಿಣಿ ಧ್ವನಿಯಾಯಿತು.

"ನಿನ್ನ ಕವನವು ಬಹಳ ಚೆನ್ನಾಗಿದೆ. ಅದಕ್ಕಾಗಿ ನಾನೊಂದು ಮುದ್ದು ಕೊಟ್ಟರೆ ಬಿದ್ದು ಹೋಗುವುದೇನೂ ಇಲ್ಲ".

ನೇತ್ರಸನ್ನೆಯಿಂದಲೇ ಅವಳು ಅವನನ್ನು ತನ್ನ ಹತ್ತಿರ ಕರೆದಳು. ಅವನು ಅವಳ ಮುಖಕ್ಕೆ ತನ್ನ ಮುಖವನ್ನು ತಾಗಿಸಿದ. ಅವಳ ತುಟಿಗಳ ಮೇಲೆ ತನ್ನ ತುಟಿಗಳನ್ನಿರಿಸಿದ. ಆ ತುಟಿಗಳಾದರೂ ಎಷ್ಟು ಕೆಂಪು! ಕಮಲಾ ದೀರ್ಘ ಚುಂಬನವನ್ನಿತ್ತಳು. ಈ ಒಂದು ಚುಂಬನದಿಂದಲೇ ಅವಳು ತನಗೆ ಎಷ್ಟು ಕಲಿಸಿದಳು, ಅವಳೆಷ್ಟು ಚತುರಳು, ಅವಳು ಹೇಗೆ ತನ್ನನ್ನು ಗೆದ್ದುಕೊಂಡಳು, ಮೋಹಿಸಿದಳು, ಎಂದು ಸಿದ್ಧಾರ್ಥ ಅಚ್ಚರಿಗೊಂಡ. ಈ ಒಂದು ದೀರ್ಘ ಚುಂಬನವೇ ಹೀಗಿದ್ದರೆ ಇನ್ನಿತರ, ಇದಕ್ಕಿಂತಲೂ ಸಂಪೂರ್ಣ ಭಿನ್ನವಾಗಿರುವ ಚುಂಬನಗಳು ಹೇಗಿರಬಹುದು? ಎಂದು ಸೋಜಿಗಪಟ್ಟ. ದೀರ್ಘವಾಗಿ ಶ್ವಾಸವನ್ನು ಎಳೆದುಕೊಂಡು ತಣ್ಣಗೆ ನಿಂತುಬಿಟ್ಟ. ಈ ಜ್ಞಾನದ ರಹಸ್ಯವು ತನ್ನ ಮುಂದೆ ನಗ್ನವಾದುದನ್ನು ಕಂಡು ಮಗುವಿನಂತೆ ವಿಸ್ಮಿತನಾದ.

ಕಮಲಾ ನುಡಿದಳು: "ನಿನ್ನ ಕವಿತೆ ಉತ್ತಮವಾಗಿದೆ. ನಾನು ಧನಿಕಳಾಗಿದ್ದರೆ ಅದಕ್ಕೆ ಹಣ ಕೊಡುತಿದ್ದೆ. ಆದರೆ ಈ ಕವಿತೆಗಳಿಂದಲೇ ಅತ್ಯಾವಶ್ಯವಿದ್ದಷ್ಟು ಹಣ ಸಂಪಾದನೆ ಮಾಡುವುದು ಕಠಿಣ. ಕಮಲೆಯ ಸ್ನೇಹಿತನಾಗಬೇಕಾದರೆ ನಿನಗೆ ಬಹಳ ಅಗತ್ಯ".

"ಅಹಾ! ನಿನ್ನ ಮುದ್ದುಗಳೇ ಕಮಲಾ! ಎಷ್ಟು ಸೊಗಸಾಗಿ ಮುದಿಡುತ್ತೀ ನೀನು!" ಎಂದು ಸಿದ್ಧಾರ್ಥ ತೊದಲುತ್ತ ಹೇಳಿದ.

"ಹೌದು. ಆದುದರಿಂದಲೇ ವಸ್ತ್ರ, ಆಭರಣ ಹಾಗೂ ಇನ್ನಿತರ ಅಂದವಾದ ವಸ್ತುಗಳ ಕೊರತೆ ನನಗುಂಟಾಗಿಲ್ಲ. ಆದರೆ ನೀನೇನು ಮಾಡುತ್ತೀ? ವಿಚಾರ, ಉಪವಾಸ, ಕವನಗಳನ್ನು ಬಿಟ್ಟು ಬೇರೇನನ್ನಾದರೂ ಮಾಡಲಾರೆಯಾ ? ".

"ನನಗೆ ಯಾಗ ಯಜ್ಞಗಳ ಹಾಡುಗಳು ಗೊತ್ತಿವೆ. ಆದರೆ ಇನ್ನು ನಾನು ಅದನ್ನು ಹಾಡುವುದಿಲ್ಲ. ನನಗೆ ಮಂತ್ರ ಪ್ರಯೋಗ ಗೊತ್ತಿದೆ. ಆದರೆ ಇನ್ನು ಪ್ರಯೋಗಿಸುವುದಿಲ್ಲ. ನಾನು ಶಾಸ್ತ್ರಗಳನ್ನು ಓದಿದ್ದೇನೆ...."

"ತಡಿ. ತಡಿ. ನಿನಗೆ ಓದಲೂ ಬರೆಯಲೂ ಬರುತ್ತದೆಯೇ ?"

"ನಿಜವಾಗಿ ಗೊತ್ತಿದೆ. ನನ್ನಂತೆ ಅನೇಕರು ಬಲ್ಲರು."

"ಇಲ್ಲ. ಬಹಳ ಜನರಿಗೆ ಓದು ಬರಹವಿಲ್ಲ. ನೋಡು, ನನಗೆ ಅದು ಗೊತ್ತಿಲ್ಲ. ನೀನದನ್ನು ಬಲ್ಲೆಯಲ್ಲ! ಬಹಳ ಒಳ್ಳೆಯದಾಯಿತು. ಮಂತ್ರ ಪ್ರಯೋಗವೂ ಕೆಲಸಕ್ಕೆ ಬದ್ದೀತು "

ಅಷ್ಟರಲ್ಲಿ ಒಬ್ಬ ಸೇವಕನು ಬಂದು ತನ್ನ ಒಡತಿಯ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದ.

"ಸಿದ್ಧಾರ್ಥ! ನನ್ನ ಭೇಟಿಗೆ ಯಾರೋ ಬಂದಿದ್ದಾರೆ! ಬೇಗ ನೀನು ಇಲ್ಲಿಂದ ಕಣ್ಮರೆಯಾಗಿ ಬಿಡು! ನೀನಿಲ್ಲಿದ್ದುದನ್ನು ಯಾರೂ ನೋಡಬಾರದು. ನಾಳೆ ಮತ್ತೆ ಬಾ " ಎಂದು ಕಮಲಾ ಅವಸರದಿಂದ ಹೇಳಿದಳು.

ಆ ಬ್ರಾಹ್ಮಣ ತರುಣನಿಗೆ ಒಂದು ಬಿಳಿ ನಿಲುವಂಗಿ ಕೊಡುವಂತೆ ಸೇವಕನಿಗೆ ಆಜ್ಞಾಪಿಸಿದಳು. ಸಿದ್ಧಾರ್ಥನನ್ನು ಸೇವಕನು ಅಡ್ಡತಿಡ್ಡ ದಾರಿಯಲ್ಲಿ ಕರೆದೊಯ್ದು ವನದಲ್ಲಿದ್ದ ಒಂದು ಮನೆಗೆ ಮುಟ್ಟಿಸಿದ. ' ಸೇವಕನು ಅವನಿಗೆ ಒಂದು ಉದ್ದ ಅಂಗಿಯನ್ನು ಕೊಟ್ಟು ದೊಡ್ಡ ಪೊದೆಪೊದರುಗಳ ಮರೆಯಲ್ಲಿ ಕರೆದುಕೊಂಡು ಹೋದ. ಅಲ್ಲಿಂದಲೇ ಒಂದು ದಾರಿ ತೋರಿಸಿ ಅದನ್ನು ಹಿಡಿದು ಯಾರಿಗೂ ಗೊತ್ತಾಗದಂತೆ ಮರೆಯಾಗಿ ವನದ ಹೊರಗೆ ಹೋಗೆಂದು ತಿಳಿಸಿದ.

ಸಿದ್ಧಾರ್ಥ ಸಂತೋಷದಿಂದಲೇ ಹೊರಟು ಹೋದ. ಅರಣ್ಯದಲ್ಲಿ ಸಂಚರಿಸಿದ್ದ ಅವನಿಗೆ ಆ ವನದಿಂದ ಪಾರಾಗಿ ಹೋಗುವುದು ಕಷ್ಟವಾಗಲಿಲ್ಲ. ಬೇಲಿಯನ್ನು ಅವನು ದಾಟಿದ. ಸಂತೋಷದಿಂದಲೇ ಅವನು ನಗರಕ್ಕೆ ಬಂದ.

ಕಮಲಾ ಕೊಡಿಸಿದ್ದ ಬಿಳಿ ಅಂಗಿಯನ್ನು ಕಂಕುಳಲ್ಲಿ ಧರಿಸಿದ್ದ. ಪ್ರವಾಸಿಕರ ಛತ್ರದಲ್ಲಿ ವಿಶ್ರಾಂತಿ ಪಡೆದ. ಹೊಟ್ಟೆಗಾಗಿ ಭಿಕ್ಷೆ ಬೇಡಿದ. ಯಾರೋ ಒಂದು ರೊಟ್ಟಿಯನ್ನು ನೀಡಿದರು. ಪ್ರಾಯಶಃ ನಾಳೆಯಿಂದ ಭಿಕ್ಷೆ ಬೇಡುವ ಪರಿಸ್ಥಿತಿ ಒದಗಲಿಕ್ಕಿಲ್ಲ ಎಂದು ಯೋಚಿಸಿದ.

ಫಕ್ಕನೇ ಹೆಮ್ಮೆ ಅವನನ್ನು ಮುತ್ತಿತು. ಈಗ ಅವನು ಯತಿಯಲ್ಲ. ಈಗ ಅವನು ಸನ್ಯಾಸಿಯಂತೆ ಭಿಕ್ಷೆ ಬೇಡುವುದು ಸರಿಯಲ್ಲ. ಆ ರೊಟ್ಟಿಯನ್ನು ಅವನು ಒಂದು ನಾಯಿಗೆಸೆದು ನಿರಾಹಾರದಿಂದಲೇ ಉಳಿದ.

ಈ ಜೀವನ ಬಹಳ ಸರಳ ಎಂದು ಸಿದ್ಧಾರ್ಥ ಯೋಚಿಸಿದ. ಇಲ್ಲಿ ಕಷ್ಟಗಳೇ ಇಲ್ಲ. ನಾನು ಸನ್ಯಾಸಿಯಾಗಿದ್ದಾಗ ಎಲ್ಲವೂ ಕಷ್ಟ. ಸಂವೇದನೆ ಹಾಗೂ ಕೊನೆಗೆ ಹತಾಶೆಯ ಜೀವನ ನಡೆಸಿದ್ದೆ. ಈಗ ಎಲ್ಲವೂ ಸುಲಭ. ಕಮಲಾ ಚುಂಬನ ವಿದ್ಯೆಯನ್ನು ಕಲಿಸಿದಷ್ಟು ನಿರಾಯಾಸವಾಗಿದೆ. ನನಗೆ ವಸ್ತ್ರ, ಹಣ ಅಗತ್ಯ. ಅಷ್ಟೇ. ಇದನ್ನು ಗಳಿಸುವುದೂ ಸುಲಭ. ಇದಕ್ಕಾಗಿ ನಿದ್ದೆ ಬಿಡುವ ಅಗತ್ಯವೂ ಇಲ್ಲ.

ಆ ನಗರದಲ್ಲಿರುವ ಕಮಲೆಯ ಮನೆಯನ್ನು ಅವನು ಈ ಹಿಂದೆಯೇ ಪತ್ತೆ ಹಚ್ಚಿದ್ದ. ಮಾರನೇಯ ದಿನ ಅವನು ಆ ಮನೆಗೆ ಹೋದ.

ಅವನನ್ನು ಕಂಡೊಡನೆಯೇ ಕಮಲಾ ಕರೆದು ಹೇಳಿದಳು: "ಎಲ್ಲವೂ ಸರಿಯಾಗಿ ಸಾಗಿದೆ. ತನ್ನನ್ನು ಭೆಟ್ಟಿಯಾಗಲು ಕಾಮಸ್ವಾಮಿ ಹೇಳಿದ. ಅವನು ಈ ನಗರದಲ್ಲಿ ಎಲ್ಲರಿಗಿಂತಲೂ ದೊಡ್ಡ ಧನಿಕ. ನೀನು ಅವನನ್ನು ಮೆಚ್ಚಿಸಿದರೆ ನಿನ್ನನ್ನು ನೇಮಿಸಿಕೊಳ್ಳುತ್ತಾನೆ. ನಿನ್ನ ಜಾಣ್ಮೆ ತೋರಿಸು. ಬೇರೆಯವರ ಮೂಲಕ ನಿನ್ನ ಹೆಸರನ್ನು ಅವನಿಗೆ ತಿಳಿಸಿದ್ದೇನೆ. ಅವನು ಬಹಳ ಸಮರ್ಥ. ಅವನೊಡನೆ ಸ್ನೇಹದಿಂದಿರು. ಆದರೆ ಅತಿ ದೀನನಾಗಬೇಡ. ನೀನು ಅವನಿಗೆ ಗುಲಾಮನಾಗುವುದು ನನಗೆ ಇಷ್ಟವಿಲ್ಲ. ಅವನೊಡನೆ ಸರಿಸಮಾನತೆಯಿಂದ ವರ್ತಿಸು. ಇಲ್ಲದಿದ್ದರೆ ನಿನ್ನ ಮೇಲೆ ನನಗೆ ಮೆಚ್ಚಿಕೆಯಾಗಲಾರದು. ಕಾಮಸ್ವಾಮಿಗೆ ವಯಸ್ಸು ಮೀರುತ್ತಬಂದಿದೆ. ಆಲಸಿಯಾಗಿದ್ದಾನೆ. ಅವನ ಮನಸ್ಸಿಗೆ ಬರುವಂತೆ ನೀನು ನಡೆದುಕೊಂಡರೆ ನಿನ್ನ ಮೇಲೆ ಸಂಪೂರ್ಣ ವಿಶ್ವಾಸವಿಡದೇ ಇರಲಾರ."

ಸಿದ್ಧಾರ್ಥ ಅವಳಿಗೆ ಧನ್ಯವಾದಗಳನ್ನರ್ಪಿಸುತ್ತ ನಗತೊಡಗಿದ.

ಅವನು ಆ ದಿನ ಹಾಗೂ ಅದರ ಹಿಂದಿನ ದಿನ ಕೂಡಾ ನಿರಾಹಾರಿಯಾಗಿರುವನೆಂದು ಗೊತ್ತಾದ ಮೇಲೆ ಗೋದಿ ರೊಟ್ಟಿ ಮತ್ತು ಹಾಲು ಹಣ್ಣುಗಳನ್ನು ತರಿಸಿ ಅವನಿಗೆ ಉಣಿಸತೊಡಗಿದಳು.

ಅವನನ್ನು ಬೀಳ್ಕೊಡುವಾಗ ಕಮಲಾ ಹೇಳಿದಳು : "ನೀನು ಬಹಳ ಅದೃಷ್ಟವಂತ. ನಿನಗಾಗಿ ಒಂದೊಂದೇ ಬಾಗಿಲುಗಳು ತೆರೆಯುತ್ತಿವೆಯಲ್ಲ. ಇದು ಹೀಗೇಕಾಯಿತು ? ನಿನ್ನಲ್ಲಿ ಏನಾದರೂ ಮೋಹನಶಕ್ತಿ ಇದೆಯೇ ?''

ಸಿದ್ಧಾರ್ಥನು ಉತ್ತರವಿತ್ತ : "ಯೋಚಿಸಲು, ಸ್ಥೈರಿಸಲು ಮತ್ತು ಉಪವಾಸಮಾಡಲು ಬಲ್ಲೆ ಎಂದು ನಾನು ನಿನ್ನೆಯೇ ನಿನಗೆ ಹೇಳಿದ್ದೆ. ಅವು ಹಿತಕಾರಿ ಎಂದು ನೀನು ಭಾವಿಸಲಿಲ್ಲ. ಆದರೆ ಕಮಲಾ, ಅದರಿಂದ ಪ್ರಯೋಜನವುಂಟು. ಕಾಡಿನಲ್ಲಿರುವ ಮೂರ್ಖರಾದ ಯತಿಗಳು ಅನೇಕ, ಪ್ರಯೋಜನಕ್ಕೆ ಬೀಳುವ ವಿಷಯಗಳನ್ನು ಕಲಿಯುವರು. ಅವರಿಗೆ ಗೊತ್ತೂ ಇವೆ. ಮೊನ್ನೆ ನಾನೊಬ್ಬ ತಲೆ ಬಾಚಿಕೊಳ್ಳದ ಭಿಕ್ಷುಕನಾಗಿದ್ದೆ. ನಿನ್ನೆ ನಾನು ಕಮಲೆಯನ್ನು ಚುಂಬಿಸಿದೆ. ಇನ್ನು ಬೇಗನೇ ನಾನೊಬ್ಬ ವರ್ತಕನಾಗಿ ಹಣ ಗಳಿಸುತ್ತೇನೆ. ಅಷ್ಟೇ ಅಲ್ಲ, ನೀನು ಮೆಚ್ಚುವಂತಹುದುದೆಲ್ಲವನ್ನೂ ಸಂಪಾದಿಸುತ್ತೇನೆ."

ಕಮಲಾ ಸಮ್ಮತಿ ಸೂಚಿಸಿ ಹೇಳಿದಳು : "ಒಳ್ಳೇದು. ನಾನಿಲ್ಲದಿರುತಿದ್ದರೆ ನಿನ್ನ ಗತಿಯೇನಾಗುತಿತ್ತು ? ಕಮಲಾ ನೆರವಾಗುತಿದ್ದಿಲ್ಲವಾದರೆ ನೀನೆಲ್ಲಿರುತಿದ್ದೀ ?"

"ನನ್ನ ಮುದ್ದಿನ ಗಿಣಿಯೇ! ನಾನು ನಿನ್ನ ವನದೊಳಗೆ ಪ್ರವೇಶಿಸಿದಾಗಲೇ ನಾನು ಪ್ರಥಮ ಹೆಜ್ಜೆ ನಿರ್ಧಾರ ಮಾಡಿದ್ದೆ. ಅತ್ಯಂತ ಸುಂದರಿಯಾದ ಸ್ತ್ರೀಯೊಬ್ಬಳಿಂದ ಪ್ರೇಮವನ್ನು ಕಲಿಯಬೇಕೆಂದು ನನ್ನ ಇಚ್ಛೆಯಾಗಿತ್ತು. ಆ ನಿರ್ಧಾರ ಮಾಡಿದ ಕ್ಷಣವೇ ಅದನ್ನು ಆಚರಣೆಯಲ್ಲಿ ತರಲೂ ನನಗೆ ಗೊತ್ತಿತ್ತು. ನೀನು ನೆರವಾಗುತ್ತೀ ಎಂದು ಗೊತ್ತಿತ್ತು. ನಿನ್ನ ಪ್ರಥಮ ನೋಟದಿಂದಲೇ ಅದನ್ನು ನಾನು ಗ್ರಹಿಸಿದೆ."

"ನನಗೆ ಬೇಡದೇ ಇರುತಿದ್ದರೆ ?"

"ನಿನಗೆ ಬೇಕಾಗಿಯೇ ಇತ್ತು. ಕಮಲಾ, ಆಲಿಸು. ನೀನೊಂದು ಕಲ್ಲನ್ನು ಕೆರೆಗೆ ಎಸೆದ ಕೂಡಲೇ ಅದು ಬೇಗನೇ ತಳ ಸೇರುತ್ತದೆ. ಸಿದ್ಧಾರ್ಥ

ನಿಗೊಂದು ಗುರಿ, ಕಾಂಕ್ಷೆ ಇದ್ದರೂ ಹಾಗೆಯೇ ಸರಿ. ಸಿದ್ಧಾರ್ಥನು ಏನೂ ಮಾಡುವುದಿಲ್ಲ. ಅವನು ಯೋಚಿಸುತ್ತಾನೆ. ಉಪವಾಸ ಮಾಡುತ್ತಾನೆ. ಸ್ಥೈರಣೆಯಿಂದಿರುತ್ತಾನೆ. ಆದರೆ ನೀರಿನಲ್ಲಿ ಮುಳುಗುವ ಕಲ್ಲಿನಂತೆ ಅವನೂ ಈ ಪ್ರಾಪಂಚಿಕ ವಿಷಯಗಳನ್ನು ದಾಟುತ್ತಾನೆ. ಅವನು ಎಳೆಯಲ್ಪಟ್ಟ. ಅವನ ಗುರಿಯೇ ಅವನನ್ನು ಎಳೆಯುತ್ತದೆ. ಆ ಉದ್ದೇಶಕ್ಕೆ ವಿರೋಧವಾದು ದಕ್ಕೆ ಅವನು ಅವಕಾಶ ಕೊಡುವುದಿಲ್ಲ. ಯೋಗಿಗಳಿಂದ ಸಿದ್ಧಾರ್ಥ ಅವನ್ನೇ ಕಲಿತಿದ್ದಾನೆ. ಹುಚ್ಚರು ಅವನ್ನು ಮಂತ್ರಶಕ್ತಿಎಂದೆನ್ನುತ್ತಾರೆ. ಭೂತಗಳು ಅದಕ್ಕೆ ಕಾರಣ ಎಂದೂ ಅವರು ಹೇಳುತ್ತಾರೆ. ಪ್ರತಿಯೊಬ್ಬನೂ ಮಂತ್ರ ಪ್ರಯೋಗಿಸಬಹುದು. ತನ್ನ ಗುರಿ ಸಾಧಿಸಬಹುದು. ಆದರೆ ಆಲೋಚನೆ, ಉಪವಾಸ ಮತ್ತು ಸ್ಥೈರಣೆಗಳು ಮಾತ್ರ ಅವನಿಗೆ ಅವಶ್ಯ.''

ಕಮಲಾ ಕಿವಿಗೊಟ್ಟು ಆಲಿಸಿದಳು. ಅವನ ದಿವ್ಯವಾಣಿಯನ್ನು ಮೆಚ್ಚಿದಳು. ಅವನ ನೋಟಕ್ಕೂ ಮನಸೋತಳು.

ಅವಳೂ ಮೆಲ್ಲಗೆ ಉಸುರಿದಳು: "ಮಿತ್ರಾ! ನೀನು ಹೇಳಿದುದು ನಿಜವಿರಲೂ ಸಾಕು. ಪ್ರಾಯಶಃ ಸಿದ್ಧಾರ್ಥ ಸುಂದರ ಪುರುಷನಾಗಿರುವುದೂ ಅವನ ನೋಟವು ಮೋಹಕವಾಗಿರುವುದೂ ಅವನು ಅದೃಷ್ಟವಂತನಾಗಿರು ವುದೂ ಕಾರಣಗಳಾಗಿರಬಹುದು.''

ಸಿದ್ಧಾರ್ಥ ಅವಳನ್ನು ಮುದ್ದಿಸಿ ಬೀಳ್ಕೊಳ್ಳುತ್ತ ಹೇಳಿದ: "ಗುರುವೇ, ನೀನು ಹೇಳಿದಂತೆಯೇ ಆಗಲಿ! ನನ್ನ ನೋಟವು ಯಾವಾಗಲೂ ನಿನಗೆ ಪ್ರಿಯಕರವಾಗಿರಲಿ! ನಿನ್ನಿಂದ ನನಗೆ ಯಾವಾಗಲೂ ಭಾಗ್ಯ ಲಭಿಸಲಿ!"

## ೭ನೆಯ ಅಧ್ಯಾಯ

ಸಿದ್ಧಾರ್ಥ ಕಾಮಸ್ವಾಮಿಯನ್ನು ಕಾಣಲು ಹೋದ. ಅವನ ಮನೆ ಬಹಳ ದೊಡ್ಡದು. ಸೇವಕರು ಅವನನ್ನು ಒಳಗೆ ಕರೆದೊಯ್ದರು. ಮನೆ ಯೊಳಗೆ ನೆಲದ ಮೇಲೆ ಬೆಲೆಯುಳ್ಳ ರತ್ನಗಂಬಳಿಯನ್ನು ಹಾಸಿದ್ದರು. ಒಂದು ಕೋಣೆಯಲ್ಲಿ ಸಿದ್ಧಾರ್ಥ ವರ್ತಕನನ್ನು ನಿರೀಕ್ಷಿಸುತ್ತ ಕುಳಿತ.

ಕಾಮಸ್ವಾಮಿಯೂ ಬಂದ. ಅವನು ನಮ್ರ,ಉಲ್ಲಾಸವುಳ್ಳ ಮನುಷ್ಯ.

ತಲೆಗೂದಲು ನರೆಯುತ್ತ ಬಂದಿವೆ. ಕಣ್ಣುಗಳು ಅವನ ಜಾಣ್ಮೆಯನ್ನೂ ವಿವೇಕವನ್ನೂ ಸ್ಪಷ್ಟಪಡಿಸುತಿದ್ದುವು. ಬಾಯಿ ಇಂದ್ರಿಯ ಸುಖಾಪೇಕ್ಷೆಯನ್ನು ಸೂಚಿಸುತಿದ್ದುವು. ಇಬ್ಬರೂ ಸ್ನೇಹದಿಂದ ವಂದಿಸಿದರು.

ವರ್ತಕ ಹೇಳಿದ: "ನೀನು ಬ್ರಾಹ್ಮಣ, ವಿದ್ವಾಂಸ ಹಾಗೂ ವ್ಯಾಪಾರಿಯೊಡನೆ ಕೆಲಸ ಮಾಡಲು ಬಯಸುತ್ತೀ ಎಂದು ನನಗೆ ಸುದ್ದಿ ಬಂದಿದೆ. ಕೆಲಸ ಮಾಡುವಷ್ಟು ಬಡತನವುಂಟೇ?''

ಸಿದ್ಧಾರ್ಥನೆಂದ: "ಇಲ್ಲ. ನನಗೆ ಬಡತನವಿಲ್ಲ. ನಾನೆಂದೂ ಅಡಚಣೆಗೊಳಗಾಗಿಲ್ಲ. ನಾನು ಯತಿಗಳ ತಂಡದಿಂದ ಬಂದೆ.''

''ಸನ್ಯಾಸಿಗಳ ತಂಡದಿಂದ ಬಂದಿದ್ದರೆ ಬಡತನವಿಲ್ಲದುಂಟೇ? ಅವರ ಸ್ವಾಧೀನ ಏನೂ ಇಲ್ಲವಲ್ಲ!"

"ನನ್ನ ಸ್ವಾಧೀನವೂ ಏನೂ ಇಲ್ಲ. ಆದರೆ ನನ್ನ ಸ್ವಬುದ್ಧಿಯಿಂದಲೇ ಏನನ್ನೂ ಸ್ವಾಧೀನವಿಟ್ಟುಕೊಂಡಿಲ್ಲ ನನಗೆ ಏನೂ ಬೇಕಾಗಿಲ್ಲ."

"ನಿನ್ನಲ್ಲಿ ಏನೂ ಇಲ್ಲದಿದ್ದರೆ ನೀನು ಜೀವಿಸುವುದಾದರೂ ಹೇಗೆ?"

"ಸ್ವಾಮಿ! ನಾನು ಅದನ್ನು ಯೋಚಿಸಿಯೇ ಇಲ್ಲ. ನಾನು ಏನೂ ಇಲ್ಲದೆ ಮೂರು ವರುಷ ಇದ್ದೆ. ಹೇಗೆ ಬದುಕಬೇಕೆಂದು ನಾನು ಒಮ್ಮೆಯೂ ಚಿಂತಿಸಿದವನಲ್ಲ."

"ಹಾಗಿದ್ದರೆ ನೀನು ಪರಾವಲಂಬಿಯಾಗಿದ್ದಿರಬೇಕಲ್ಲವೇ?"

"ತೋರಿಕೆಗೆ ಹಾಗೆ. ವರ್ತಕನೂ ಪರರ ಸೊತ್ತಿನಿಂದಲೇ ಬದುಕಿಬುವನಲ್ಲ!''

"ಚೆನ್ನಾಗಿ ಹೇಳಿದೆ. ಆದರೆ ವ್ಯಾಪಾರಿ ಪರರಿಂದ ಸುಮ್ಮ ಸುಮ್ಮಗೆ ಹಣ ತೆಗೆದುಕೊಳ್ಳುವುದಿಲ್ಲ. ಅದರ ಬದಲು ಅವನು ಸರಕುಗಳನ್ನು ಕೊಡುತ್ತಾನೆ.''

"ಅದು ಲೋಕರೂಢಿ. ಪ್ರತಿಯೊಬ್ಬರೂ ಕೊಡುತ್ತಾರೆ. ಪ್ರತಿಯೊಬ್ಬರೂ ತೆಗೆದುಕೊಳ್ಳುತ್ತಾರೆ. ಜೀವನವೇ ಹಾಗೆ."

"ಆಂ, ಅದು ಹೇಗೆ? ನಿನ್ನ ಸ್ವಾಧೀನ ಏನೂ ಇಲ್ಲದಿದ್ದರೆ ನೀನು ಯಾರಿಗಾದರೂ ಏನನ್ನು ಕೊಡುವೆ?''

"ಪ್ರತಿಯೊಬ್ಬನೂ ತನ್ನಲ್ಲಿರುವುದನ್ನು ಮಾತ್ರ ಕೊಡಬಲ್ಲ. ಸೈನಿಕನು

ಶಕ್ತಿಯನ್ನೂ, ವ್ಯಾಪಾರಿಯು ಸಾಮಾನುಗಳನ್ನೂ, ಗುರುವು ಉಪದೇಶವನ್ನೂ, ರೈತನು ಕಾಳನ್ನೂ, ಬೆಸ್ತನು ಮೀನನ್ನೂ ಕೊಡಬಲ್ಲರು ”

“ಹೌದು. ಹೌದು. ನೀನೇನು ಕೊಡುತ್ತೀಯಾ? ಕೊಡಬಲ್ಲಂತಹ ಯಾವ ವಿದ್ಯೆಯನ್ನು ನೀನು ಕಲಿತಿರುವೆ?”

“ನಾನು ಯೋಚಿಸಬಲ್ಲೆ. ಉಪವಾಸಮಾಡಬಲ್ಲೆ. ಅಪಾರ ಸಹನಶಕ್ತಿಯೂ ಇದೆ.”

“ಇಷ್ಟೆ?”

“ಅಷ್ಟೆ”

“ಇವುಗಳಿಂದೇನು ಪ್ರಯೋಜನ? ಈಗ ಉದಾಹರಣೆಗಾಗಿ ಉಪವಾಸ. ಅದರಿಂದ ಯಾವ ಹಿತವಿದೆ?”

“ಸ್ವಾಮಿ! ಅದು ಅಮೂಲ್ಯ. ಒಬ್ಬ ಮನುಷ್ಯನಲ್ಲಿ ಉಣಲು ಏನೂ ಇಲ್ಲದಿದ್ದರೆ, ಅವನು ಉಪವಾಸ ಮಾಡುವುದೇ ಬುದ್ಧಿವಂತಿಕೆಯಾಗಿದೆ. ಈಗ, ಸಿದ್ಧಾರ್ಥ ಉಪವಾಸ ಮಾಡಲು ಕಲಿತಿದ್ದಿಲ್ಲವಾದರೆ ನಿನ್ನಲ್ಲಾಗಲೀ ಬೇರೆಯವರಲ್ಲಾಗಲೀ ಅವನು ಇಂದೇ ಯಾವುದಾದರೊಂದು ಕೆಲಸ ಹುಡುಕಬೇಕಾಗಿತ್ತು. ಹಸಿವು ಆ ರೀತಿ ಮಾಡಿಸುತಿತ್ತು. ಆದರೆ ಈಗ ಸಿದ್ಧಾರ್ಥ ಶಾಂತಚಿತ್ತದಿಂದ ಸೈರಿಸಬಲ್ಲ. ಅವನು ಸಹನೆಗೆಡಲಾರ. ಅವನಿಗೆ ಅಡಚಣೆಯಿಲ್ಲ. ದೀರ್ಘಕಾಲದ ವರೆಗೆ ಹಸಿವನ್ನು ತಡೆಹಿಡಿಯಲೂ ಅವನಿಗೆ ಗೊತ್ತುಂಟು. ಅವನು ಉಪಹಾಸ ಮಾಡಲೂ ಸಮರ್ಥ. ಆದುದರಿಂದ ಉಪವಾಸದಿಂದ ತುಂಬಾ ಪ್ರಯೋಜನವಿದೆ, ಸ್ವಾಮಿ.’’

“ನೀನು ಹೇಳಿದುದು ಸರಿ. ಸ್ವಲ್ಪ ತಾಳು.’’

ಎಂದು ಹೇಳಿ ಕಾಮಸ್ವಾಮಿ ಹೊರಗೆ ಹೋದ. ಬರುವಾಗ ಕಾಗದದ ಒಂದು ಸುರುಳಿ ತಂದ. ಅದನ್ನು ಅತಿಥಿಯ ಕೈಗೆ ಕೊಟ್ಟು, “ಇದನ್ನು ಓದಬಲ್ಲೆಯಾ?’’ ಎಂದು ಪ್ರಶ್ನಿಸಿದ.

ಸಿದ್ಧಾರ್ಥ ಸುರುಳಿಯನ್ನು ನೋಡಿದ. ಅದು ಕ್ರಯ ಚೀಟು (ಖರೀದಿ ಪತ್ರ) ಆಗಿತ್ತು. ಅದನ್ನು ಅವನು ಸರಸವಾಗಿ ಓದಿದ.

ಕಾಮಸ್ವಾಮಿ, “ಚೆನ್ನಾಗಿ ಓದಿದೆ” ಎಂದು ಹೇಳಿ ನಕ್ಕು, “ಈ ಕಾಗದದಲ್ಲಿ ಸ್ವಲ್ಪ ಬರೆ ನೋಡೋಣ” ಎಂದ.

ಸಿದ್ಧಾರ್ಥನಿಗೆ ಹಾಳೆಯ ಒಂದು ತುಣುಕನ್ನೂ ಲೇಖನಿಯನ್ನೂ ಕೊಟ್ಟ. ಸಿದ್ಧಾರ್ಥ ಬೇಗನೇ ಬರೆದು ತೋರಿಸಿದ.

ಕಾಮಸ್ವಾಮಿ ಅದನ್ನು ಓದಿ, ಹೇಳಿದ: "ಬರಹ ಚೆನ್ನಾಗಿದೆ. ವಿಚಾರವು ಉತ್ತಮ. ಜಾಣ್ಮೆ ಚೆನ್ನಾಗಿದೆ. ತಾಳ್ಮೆ ಉತ್ತಮ.''

ಆ ಮೇಲೊಂದು ಕ್ಷಣ ಕಳೆದ ಮೇಲೆ ವರ್ತಕನು ಸಿದ್ಧಾರ್ಥನನ್ನು ಹೊಗಳಿದ. "ನೀನು ಸುಂದರವಾಗಿ ಬರೆಯುತ್ತೀ. ಇನ್ನೂ ನಿನ್ನೊಡನೆ ಚರ್ಚಿಸತಕ್ಕ ವಿಷಯಗಳು ಬಹಳ ಇವೆ. ಈಗ ಸಾಕು. ನೀನು ನನ್ನ ಅತಿಥಿಯಾಗಿ ನನ್ನ ಮನೆಯಲ್ಲೇ ಇರು.''

ಸಿದ್ಧಾರ್ಥ ಅವನನ್ನು ಅಭಿನಂದಿಸಿದ ಮತ್ತು ಒಪ್ಪಿಕೊಂಡ. ಅವನು ಆ ವರ್ತಕನ ಮನೆಯಲ್ಲೇ ವಾಸಿಸಿದ ಅವನಿಗೆ ಉತ್ತಮ ವಸ್ತ್ರಗಳನ್ನೂ ಪಾದರಕ್ಷೆಗಳನ್ನೂ ತಂದರು. ಸೇವಕನೊಬ್ಬ ದಿನಂಪ್ರತಿ ಸ್ನಾನಕ್ಕೆ ಅಣಿ ಮಾಡಿದ. ದಿನಕ್ಕೆರಡು ಸಲ ಸುಗ್ರಾಸ ಭೋಜನವನ್ನು ಸಿದ್ಧಗೊಳಿಸಿದರು. ಆ ಸಿದ್ಧಾರ್ಥ ಒಪ್ಪತ್ತು ಮಾತ್ರ ಊಟ ಮಾಡಿದ. ಅಲ್ಲದೆ ಮದ್ಯ ಮತ್ತು ಮಾಂಸಗಳನ್ನು ಮುಟ್ಟಲಿಲ್ಲ.

ಕಾಮಸ್ವಾಮಿ ತನ್ನ ವ್ಯಾಪಾರ ವ್ಯವಹಾರವನ್ನು ವಿವರಿಸಿದ. ಸಾಮಾನುಗಳನ್ನೂ ಗುದಾಮುಗಳನ್ನೂ ಲೆಕ್ಕಪತ್ರಗಳನ್ನೂ ತೋರಿಸಿದ. ಸಿದ್ಧಾರ್ಥ ಅನೇಕ ಹೊಸ ಸಂಗತಿಗಳನ್ನು ತಿಳಿದುಕೊಂಡ. ಅವನು ಎಲ್ಲರ ಮಾತನ್ನು ಆಲಿಸುತಿದ್ದ. ತಾನು ಮಾತ್ರ ಎಷ್ಟು ಬೇಕೋ ಅಷ್ಟೇ ಮಾತನಾಡುತಿದ್ದ. ಕಮಲಾ ಹೇಳಿದ ಮಾತಿನಂತೆ ಸಿದ್ಧಾರ್ಥ ಆ ವಣಿಕನ ಗುಲಾಮನಾಗಲಿಲ್ಲ. ಸರಿಸಮಾನತೆಯಿಂದ ಮತ್ತು ಅದಕ್ಕಿಂತ ಹೆಚ್ಚಿನ ಗೌರವದಿಂದಲೇ ತನ್ನನ್ನು ನಡೆಸಿಕೊಳ್ಳುನಂತೆ ವರ್ತಿಸಿದ. ಕಾಮಸ್ವಾಮಿ ಬಹಳ ಜಾಗರೂಕತೆಯಿಂದ ವ್ಯಾಪಾರ ಬೆಳೆಸುತಿದ್ದ. ಅವನಿಗೆ ಅದರ ಮೇಲೆ ಅತಿ ಮೋಹ. ಆದರೆ ಸಿದ್ಧಾರ್ಥನಿಗೆ ಅದೊಂದು ಆಟವಾಗಿಯೇ ಪರಿಣಮಿಸಿತು. ಅದರ ಕಾನೂನು ಕಾಯಿದೆಗಳನ್ನು ಅವನು ಗ್ರಹಿಸಲೆತ್ನಿಸಿದ. ಆದರೆ ಅದರಿಂದ ಅವನಿಗೆ ಸಂತೋಷವಾಗಲಿಲ್ಲ.

ಕಾಮಸ್ವಾಮಿಯ ಮನೆಯಲ್ಲಿ ವಾಸಿಸಲು ಆರಂಭಿಸಿದ ಅಲ್ಪಾವಧಿಯಲ್ಲಿಯೇ ಅವನೂ ಯಜಮಾನನ ವ್ಯಾಪಾರ ವ್ಯವಹಾರದಲ್ಲಿ ಭಾಗ ತೆಗೆದು

ಕೊಂಡ. ಅಲ್ಲದೆ ದಿನಂಪ್ರತಿ ಕಮಲಾ ಆಮಂತ್ರಿಸಿದ ಹೊತ್ತಿಗೆ ಸರಿಯಾಗಿ, ಉತ್ತಮವಾದ ಬಟ್ಟೆಬರೆಗಳನ್ನು ಧರಿಸಿ, ಶೃಂಗಾರ ಸುಕುಮಾರನಂತೆ ಅವಳನ್ನು ಭೆಟ್ಟಿಯಾದ. ಕೆಲವು ದಿನಗಳ ಮೇಲೆ ಅವಳಿಗೆ ಅಮೂಲ್ಯ ಇನಾಮುಗಳನ್ನೂ ಕೊಟ್ಟ. ಅವಳ ಆ ಮಧುರ ಕೆಂಪು ತುಟಿಗಳಿಂದ ಅವನು ಅನೇಕ ವಿಷಯಗಳನ್ನು ಕಲಿತುಕೊಂಡ. ಅವಳ ಕೋಮಲ, ಸುಂದರ ಕೈ, ಕೂಡ ಅನೇಕ ವಿದ್ಯೆಗಳನ್ನು ಕಲಿಸಿತು.

ಪ್ರೇಮ ಸಂಬಂಧದಲ್ಲಿ ಅವನು ಬರಿಬಾಲಕ. ಕಣ್ಮುಚ್ಚಿ, ಅತ್ಯಾಶೆಯಿಂದ ಅದರ ಪಾತಾಳದ ವರೆಗೂ ಮುಳುಗಲು ಅವನು ಬಯಸಿದ್ದ. ಆದರೆ ಒಬ್ಬನು ಪ್ರೇಮಮಾಡದೆ ಪ್ರೇಮಸುಖವನ್ನು ಪಡೆಯಲಾರನೆಂದು ಕಮಲಾ ಕಲಿಸಿದಳು ಪ್ರತಿಯೊಂದು ಹಾವಭಾವ, ಸನ್ನೆ, ಲಾಲನೆ, ಸ್ಪರ್ಶ, ನೋಟ, ಶರೀರದ ಪ್ರತಿಯೊಂದು ಅಂಗ ಇವುಗಳಲ್ಲೆಲ್ಲ ಒಂದು ಮದನ ರಹಸ್ಯವಿದೆ. ಬಲ್ಲವನಿಗೆ ಇದು ಪ್ರತಿಯೊಂದೂ ಮದನಸುಖದ ಕೇಂದ್ರವಾಗಿದೆ. ಪ್ರೇಮಲೀಲೆ ಮುಗಿದ ಮೇಲೆ ಪ್ರೇಮಿಗಳು ತಂತಮ್ಮ ರೂಪ ಗುಣವರ್ಣನೆ ಮಾಡದೆ, ಪರಸ್ಪರ ಸೋಲಿಸದೆ, ಅಗಲಬಾರದೆಂದೂ ಅವಳು ತಿಳಿಸಿದಳು. ಏಕೆಂದರೆ, ಪ್ರೇಮಕಾಮಗಳಲ್ಲಿ ಅತೃಪ್ತಿ, ವ್ಯರ್ಥ ಅಥವಾ ಒಬ್ಬರಿನ್ನೊಬ್ಬರನ್ನು ದುರುಪಯೋಗಗೊಳಿಸಿದ ಭಾವನೆ ತಲೆದೋರುವಂತಾಗಬಾರದು. ಸಿದ್ಧಾರ್ಥ ಆ ಬುದ್ಧಿವಂತಳೂ ಸುಂದರಳೂ ಆದ ಗಣಿಕೆಯೊಡನೆ ತಾಸುತಾಸುಗಳನ್ನು ಕಳೆದ. ಅವಳ ಶಿಷ್ಯ, ಪ್ರೇಮಿ ಹಾಗೂ ಸ್ನೇಹಿತನಾದ. ಇಲ್ಲಿ ಕಮಲೆಯೊಡನೆ ಅವನು ಕಳೆದ ಈ ಜೀವನಕ್ಕೆ ಬೆಲೆಯಿದೆ. ! ಕಾಮುಸ್ವಾಮಿಯ ವ್ಯಾಪಾರೀ ಸಂಬಂಧದಲ್ಲಿ ಏನೂ ಅರ್ಥವಿಲ್ಲ.

ಆ ವರ್ತಕನು ಅತಿ ಮಹತ್ವದ ಕಾಗದ ಹಾಗೂ ಸರಕುಗಳಿಗೆ ಕೊಡುವ ಖರೀದಿ ಪತ್ರಗಳನ್ನು ಬರೆಯುವುದನ್ನೂ ಸಿದ್ಧಾರ್ಥನಿಗೆ ಒಪ್ಪಿಸಿದ. ಮಹತ್ವದ ವಿಷಯ ವಿಚಾರಗಳಲ್ಲಿ ಸಿದ್ಧಾರ್ಥನ ಸಲಹೆಯನ್ನೂ ಕೇಳುತಿದ್ದ. ಅಕ್ಕಿ, ಉಣ್ಣೆ, ಆಮದು, ರಫ್ತು ಇವೆಲ್ಲ ಅವನಿಗೆ ಅಷ್ಟು ತಿಳಿಯಲಿಲ್ಲ ಎಂದು ಕಾಮುಸ್ವಾಮಿ ಕಂಡುಕೊಂಡ. ಆದರೆ ವರ್ತಕನಿಗಿತಲೂ ಸಿದ್ಧಾರ್ಥನಲ್ಲಿ ಹೆಚ್ಚು ಶಾಂತಗುಣ ವಿವೇಕಗಳಿದ್ದುವು. ಹೊಸಬರು ಬಂದಾಗ ಅವರ ಮಾತುಗಳನ್ನೆಲ್ಲ ಸಮಾಧಾನದಿಂದ ಕೇಳುತಿದ್ದ. ಇದರಿಂದ ಅವರಿಗೆಲ್ಲ

ಸಿದ್ಧಾರ್ಥನ ಮೇಲೆ ಬಹಳ ಆದರವುಂಟಾಯಿತು.

ಕಾಮುಸ್ವಾಮಿ ಒಮ್ಮೆ, ತನ್ನ ಮಿತ್ರನೊಬ್ಬನೊಡನೆ ಹೇಳಿದ: "ಆ ಬ್ರಾಹ್ಮಣ ವ್ಯಾಪಾರಿಯಲ್ಲ. ವ್ಯಾಪಾರಿಯೂ ಆಗಲಾರ. ವ್ಯಾಪಾರದಲ್ಲಿ ಅವನು ತನ್ಮಯನಾಗಿಲ್ಲ. ಆದರೆ ತನ್ನಿಂದ ತಾನೇ ಯಶ ಬರುವಂತಹ ಒಂದು ರಹಸ್ಯ ಮಾತ್ರ ಅವನಲ್ಲಿದೆ. ಅದಕ್ಕೆ ಅವನು ಹುಟ್ಟಿದ ಅದೃಷ್ಟ ಗಳಿಗೆಯೋ, ಮಂತ್ರವೋ, ಋಷಿಗಳಿಂದ ಕಲಿತನೋ ಏನೋ ಹೇಳಲಾರೆ ವ್ಯಾಪಾರ ವೆಂದರೆ ಒಂದು ಆಟ ಎಂದು ತಿಳಿದು ಆಡುತಿದ್ದಾನೆ. ಅದರಲ್ಲಿ ಅವನ ಜೀವ ವಿಲ್ಲ ನಷ್ಟವಾದೀತೆಂಬ ಭಯವಿಲ್ಲ. ನಷ್ಟವಾದರೆ ಚಿಂತಿಸುವುದೂ ಇಲ್ಲ."

ಆ ಮಿತ್ರನು ಕಾಮುಸ್ವಾಮಿಗೆಂದ: "ಅವನು ಮಾಡಿದ ವ್ಯಾಪಾರದ ಲಾಭದಲ್ಲಿ ಒಂದು ಮೂರನೇ ಅಂಶವನ್ನು ಅವನಿಗೆ ಕೊಡು. ನಷ್ಟವೊದಗಿ ದರೆ ಸಮ ಪ್ರಮಾಣದಲ್ಲಿ ಅವನು ಪಾಲುಗಾರನಾಗಲಿ. ನೀನು ಹೀಗೆ ಮಾಡಿ ದರೆ ಅವನು ಉತ್ಸಾಹದಿಂದ ಕೆಲಸ ಮಾಡುತ್ತಾನೆ."

ಕಾಮುಸ್ವಾಮಿ ಅದರಂತೆ ಮಾಡಿದ. ಆದರೆ ಸಿದ್ಧಾರ್ಥ ಅದರ ಕಡೆ ವಿಶೇಷ ಗಮನ ಕೊಡಲಿಲ್ಲ. ತನ್ನ ಉಪ್ಪನ್ನ ಊಟಮಾಡುತ್ತಿರುವುದನ್ನು ಅವನಿಗೆ ಖಚಿತಗೊಳಿಸಲು ಆ ವರ್ತಕನು ಯತ್ನಿಸಿದರೂ ಅದು ನಿಷ್ಫಲ ವಾಯಿತು. ತನ್ನ ಅನ್ನವನ್ನೇ ತಾನು ಊಟ ಮಾಡುತ್ತಿರುವೆನೆಂದು ಸಿದ್ಧಾ ರ್ಥನ ಭಾವನೆ. ಹಾಗೆ ವಿಚಾರ ಮಾಡಿದರೆ ತನ್ನದೆನ್ನುವುದು ಏನೂ ಇಲ್ಲ. ಎಲ್ಲ ಬೇರೊಬ್ಬರ ಅನ್ನವೇ. ಅಥವಾ ಪ್ರತಿಯೊಬ್ಬರ ಅನ್ನವೆಂದರೂ ಸರಿ ಯಾದೀತು. ಕಾಮುಸ್ವಾಮಿಯ ಕಷ್ಟಗಳ ಬಗ್ಗೆ ಕೂಡಾ ಸಿದ್ಧಾರ್ಥ ಚಿಂತಿಸು ತಿದ್ದಿಲ್ಲ. ಕಾಮುಸ್ವಾಮಿ ಅನೇಕ ಕಷ್ಟಗಳಿಗೆ ಈಡಾಗುತಿದ್ದ. ಒಂದು ವ್ಯಾಪಾ ರದಲ್ಲಿ ನಷ್ಟವೊದಗುವಂತಾದರೆ, ಕಳಿಸಿದ ಸರಕು ಮುಳುಗಿ ಹೋದರೆ, ಸಾಲಿಗನು ದಿವಾಳಿಯಾದರೆ, ಕಾಮುಸ್ವಾಮಿ ಸಿಟ್ಟಿನಿಂದ ಒದರುತಿದ್ದ. ಅವನ ಹಣೆಯಲ್ಲಿ ನೆರಿಗೆಗಳು ಬೀಳುತಿದ್ದುವು. ರಾತ್ರಿ ನಿದ್ದೆ ಬೀಳುತಿದ್ದಿಲ್ಲ. ಅದ ರಿಂದ ಏನೂ ಫಲವಿಲ್ಲವೆಂದು ಸಿದ್ಧಾರ್ಥ ಶಾಂತಚಿತ್ತನಾಗಿಯೇ ಇರುತಿದ್ದ.

ಒಮ್ಮೆ ಕಾಮುಸ್ವಾಮಿ ಮಾತನಾಡುತಿದ್ದಾಗ ಸಿದ್ಧಾರ್ಥ ತನ್ನಿಂದ ಎಲ್ಲವನ್ನೂ ಕಲಿತುಕೊಂಡನೆಂದು ಹೇಳಿದನು. ಆಗ ಸಿದ್ಧಾರ್ಥ ಹೇಳಿದ. "ಅಂತಹ ಮಸ್ಕಿರಿ ಮಾಡಬೇಡ. ಒಂದು ಬುಟ್ಟಿ ಮೀನಿನ ಬೆಲೆ ಎಷ್ಟು,

ಸಾಲ ಕೊಡುವ ಹಣಕ್ಕೆ ಬಡ್ಡಿ ಎಷ್ಟು ಎಂದು ನಿನ್ನಿಂದ ತಿಳಿದುಕೊಂಡಿದ್ದೇನೆ ಇದು ನಿನ್ನ ಜ್ಞಾನ. ಆದರೆ ಆಲೋಚನಾ ಶಕ್ತಿಯನ್ನು ನಿನ್ನಿಂದ ಕಲಿತಿಲ್ಲ ಮಾರಾಯಾ! ನನ್ನಿಂದ ಅದನ್ನು ನೀನು ಕಲಿತುಕೊಂಡರೆ ಲೇಸು.''

ಸಿದ್ಧಾರ್ಥನ ಮನಸ್ಸು ನಿಜವಾಗಿಯೂ ವ್ಯಾಪಾರದಲ್ಲಿಲ್ಲ. ಕಮಲೆಗೆ ಹಣ ದೊರಕಿಸಲು ಈ ಕೆಲಸದಿಂದ ಉಪಯೋಗವಾಗುತಿತ್ತು. ಅವನಿಗೆ ಆಗತ್ಯವಿದ್ದುದಕ್ಕಿಂತಲೂ ಹೆಚ್ಚು ಹಣವೇ ದೊರೆಯಿತು. ತನಗಿಂತ ಭಿನ್ನ ಕೆಲಸ, ಸುಖ ಕಷ್ಟಗಳನ್ನನುಭವಿಸಿದವರ ಮೇಲೆ ಸಿದ್ಧಾರ್ಥನಿಗೆ ಸಹಾನುಭೂತಿ. ಅವನ್ನು ತಿಳಿದುಕೊಳ್ಳುವ ಕುತೂಹಲ. ಎಲ್ಲರೊಡನೆ ಮಾತನಾಡಲು, ವಾಸಿಸಲು, ಕಲಿಯಲು ಅವನಿಗೆ ಕಷ್ಟವಾಗವೇ ಇದ್ದರೂ ತಾನೂ ಅವರೂ ಪ್ರತ್ಯೇಕ ಎಂದವನು ಕಾಣುತಿದ್ದ. ಅವನು ಒಮ್ಮೆ ಯತಿಯಾಗಿದ್ದುದೇ ಅದಕ್ಕೆ ಕಾರಣ.

ಜನರು ಮಕ್ಕಳಂತೆ ಅಥವಾ ಪಶುಗಳಂತೆ ಜೀವಿಸುತ್ತಿರುವುದನ್ನು ಅವನು ನೋಡಿದ. ಒಮ್ಮೊಮ್ಮೆ ಅದು ಅವನಿಗೆ ಪ್ರಿಯಕರವಾದರೂ ಮತ್ತೊಮ್ಮೆ ಅದು ಹೇಯವಾಗುತಿತ್ತು. ಮುಂಜಾನೆಯಿಂದ ಸಂಜೆಯ ವರೆಗೆ ಅವರು ದುಡಿಯುತ್ತಿರುವುದನ್ನೂ ದುಃಖಪಡುತ್ತಿರುವುದನ್ನೂ ತನಗೆ ಏನೂ ಮಹತ್ವ ಕಾಣದ ದುಡ್ಡು, ಕ್ಷುಲ್ಲಕ ಮಾನ ಮರ್ಯಾದೆ, ಅಲ್ಪಸುಖಗಳಿಗಾಗಿ ವ್ಯಸನಪಡುತ್ತಿರುವುದನ್ನೂ ಕಂಡ. ಒಬ್ಬರನ್ನೊಬ್ಬರು ನಿಂದಿಸುವುದನ್ನೂ ಹೊಡೆಯುವುದನ್ನೂ ನೋಡಿದ. ಯತಿಯು ನಗುವಂತಹ ಸಣ್ಣ ಸಣ್ಣ ನೋವುಗಳಿಗಾಗಿ ಕೂಡಾ ಅವರು ಅಳುತ್ತಿದ್ದರು. ಯಾವುದಾದರ ಕೊರತೆ ಬಿದ್ದರೂ ಅವರು ಪೇಚಾಡುತಿದ್ದರು.

ಜನರು ತನಗೆ ತಂದು ಕೊಟ್ಟುದುದೆಲ್ಲವನ್ನೂ ಅವನು ಸ್ವೀಕರಿಸಿದ. ರೇಶ್ಮೆ ಬಟ್ಟೆ ತಂದ ದೊಡ್ಡ ವ್ಯಾಪಾರಿಗೂ ಸ್ವಾಗತ. ಸಾಲ ಕೇಳಲು ಬಂದವನಿಗೂ ಅಷ್ಟೇ ಸ್ವಾಗತ. ಭಿಕ್ಷುಕನಿಗೂ ಅದೇ ರೀತಿಯ ಸ್ವಾಗತ. ಬಂದ ಭಿಕ್ಷುಕನು ಯತಿಯಷ್ಟು ಬಡವನಲ್ಲದಿದ್ದರೂ ಒಂದು ತಾಸು ಕುಳಿತು ಅವನು ತನ್ನ ದಾರಿದ್ರ್ಯವನ್ನು ತೋಡಿಕೊಂಡರೂ ಅದನ್ನು ಕೇಳುತಿದ್ದ.

ಅನೇಕರು ಅವನ ಹತ್ತಿರ ಬರುತಿದ್ದರು. ಕೆಲವರು ವ್ಯಾಪಾರಕ್ಕಾಗಿ,

ಕೆಲವರು ಮೋಸಮಾಡಲು, ಕೆಲವರು ಮಾತು ಕೇಳಲು, ಹಲವರು ಅವನ ಸಹಾನುಭೂತಿ ಗಳಿಸಲು, ಬಯಸಿ ಬರುತಿದ್ದರು. ಬೇಕಾದವರಿಗೆ ಅವನು ಬುದ್ಧಿ ಹೇಳಿದ, ಅಗತ್ಯವಿದ್ದಲ್ಲಿ ಅನುತಾಪ ತೋರಿದ. ಕೊಡಬೇಕಾದಲ್ಲಿ ಇನಾಮುಗಳನ್ನು ಕೊಟ್ಟ. ಮೋಸಹೋಗುವ ಪ್ರಸಂಗ ಬಂದಾಗ ಅದಕ್ಕೂ ಸ್ವಲ್ಪ ಎಡೆಗೊಟ್ಟ. ಈ ಆಟದಲ್ಲಿ ಅವನು ತಲ್ಲೀನನಾದ. ಮೊದಲು ಬ್ರಹ್ಮ, ದೇವತೆಗಳು ಇವುಗಳ ಚಿಂತನೆ ಮಾಡಿದಷ್ಟು ಈಗ ಈ ವ್ಯವಹಾರದ ಬಗ್ಗೆ ಯೋಚಿಸಿದ.

ಒಮ್ಮೊಮ್ಮೆ ಅವನ ಅಂತರ್ವಾಣಿಯ ಕ್ಷೀಣ ಸ್ವರ ಅವನಿಗೆ ಕೇಳಿಸು ತಿತ್ತು. ಒಮ್ಮೆ ಅದು ಎಚ್ಚರಿಸುತಿತ್ತು. ಇನ್ನೊಮ್ಮೆ ದೂರು ಹೇಳುತಿತ್ತು. ಕೊನೆಕೊನೆಗೆ ಅದು ಕೇಳಲಾರದಷ್ಟು ಕ್ಷೀಣವಾಯಿತು. ಆಗ ತನ್ನ ಬಾಳು ವಿಲಕ್ಷಣವಾಗಿದೆ, ತಾನು ಮಾಡುತ್ತಿರುವುದೆಲ್ಲ ಒಂದು ಆಟ, ತಾನು ಹಸನ್ಮುಖಿ, ಆಗಾಗ ಸುಖವೂ ಲಭಿಸುತ್ತಿದೆ, ಆದರೆ ಇದು ನಿಜವಾದ ಜೀವನವಲ್ಲ ಎಂದು ಅವನು ಕಂಡುಕೊಳ್ಳುತಿದ್ದ.

ಆಟದಲ್ಲಿ ನಿರತನಾದವನು ಚೆಂಡಿನೊಡನೆ ಆಡುವಂತೆ ಸಿದ್ಧಾರ್ಥನೂ ವ್ಯಾಪಾರದಾಟ ಆಡಿದ. ಸುತ್ತುಮುತ್ತಲಿನ ಜನತೆಯನ್ನು ನಿರೀಕ್ಷಿಸಿದ. ಅದರಿಂದ ಸಂತೋಷಪಟ್ಟ. ಆದರೆ ಅದರಲ್ಲಿ ಅವನಿಗೆ ಆಸಕ್ತಿ ಇರಲಿಲ್ಲ. ಅವನ ಆತ್ಮ ಎಲ್ಲೋ, ಬಹುದೂರ, ಅಗೋಚರವಾಗಿ, ಈ ಜೀವನದೊಡನೆ ಸಂಬಂಧ ವಿಟ್ಟುಕೊಳ್ಳದೆ ಅಲೆಯುತಿತ್ತು. ಈ ವಿಚಾರಗಳು ಸುಳಿದಾಗ ಅವನಿಗೇ ಒಮ್ಮೊಮ್ಮೆ ಭಯವಾಗತೊಡಗಿತು. ಈ ಜನರಂತೆ ಅವರ ದಿನನಿತ್ಯದ ವ್ಯವಹಾರದಲ್ಲಿ ತಾನೇಕೆ ಪಾಲುಗಾರನಾಗಬಾರದು, ಅವರಂತೇಕೆ ಜೀವಿಸಬಾರದು, ತಾನು ಕೇವಲ ಪ್ರೇಕ್ಷಕನಾಗಿರುವೆನಲ್ಲ ಎಂದವನು ಪರಿತಪಿಸಿದ.

ಕಮಲೆಯ ಭೇಟಿಗೆ ತಪ್ಪದೇ ತೆರಳಿದ. ಪ್ರೇಮಕಲೆಯಲ್ಲೂ ಪಾರಂಗತನಾದ. ಅವಳೊಡನೆ ಸರಸ ಸಲ್ಲಾಪಗೈದ. ಅದನ್ನೂ ಅವಳಿಂದ ಕಲಿತ. ಅವಳಿಗೂ ಸಲಹೆ ಕೊಟ್ಟ. ಅವಳಿಂದಲೂ ಕೇಳಿಕೊಂಡ. ಗೋವಿಂದನಿಗಿಂತಲೂ ಚೆನ್ನಾಗಿ ಕಮಲಾ ಅವನನ್ನು ಅರಿತುಕೊಂಡಳು. ಸ್ವಲ್ಪಮಟ್ಟಿಗೆ ಅವಳೂ ಅವನಂತೆಯೇ ಇದ್ದಳು

ಒಮ್ಮೆ ಅವನು ಹೇಳಿದ: "ಕಮಲಾ! ನೀನು ನನ್ನಂತೆಯೇ ಇದ್ದೀಯಲ್ಲ!

ನೀನು ಬೇರೆ ಜನರಂತಲ್ಲ. ನೀನು ಕಮಲೆಯೇ ಸರಿ. ಬೇರೆ ಪ್ರೇಯು ನಿನ್ನಂತೆ ಇರಲಿಕ್ಕಿಲ್ಲ. ನಿನ್ನ ಹೃದಯದಲ್ಲಿ ಶಾಂತಿಯಿದೆ. ಬೇಕಾದಾಗ ನೀನು ನನ್ನಂತೆಯೇ ಏಕಾಂತವಾಸದಲ್ಲಿ ಆಶ್ರಯಪಡೆಯಬಲ್ಲೆ. ಆದರೆ ಪ್ರತಿಯೊಬ್ಬರೂ ಅದನ್ನು ಗಳಿಸಬಹುದಾಗಿದೆ."

"ಎಲ್ಲ ಜನರೂ ಬುದ್ಧಿವಂತರಲ್ಲ"ಎಂದು ಕಮಲಾ ಉತ್ತರ ಕೊಟ್ಟಳು.

ಸಿದ್ಧಾರ್ಥನೆಂದ: "ಜಾಣತನಕ್ಕೂ ಅದಕ್ಕೂ ಏನೂ ಸಂಬಂಧವಿಲ್ಲ. ಕಾಮಸ್ವಾಮಿ ನನ್ನಷ್ಟೇ ಚತುರ. ಆದರೆ ಅವನ ಹೃದಯದಲ್ಲಿ ಅಂತಹ ಏಕಾಂತ ಆಶ್ರಯ ಸ್ಥಳವಿಲ್ಲ. ಬುದ್ಧಿಯಿಲ್ಲದ ಅನೇಕರು ಅದನ್ನು ಗಳಿಸಿದ್ದಾರೆ, ಕಮಲಾ! ಹೆಚ್ಚಿನ ಜನರು ಉದುರುವ ಎಲೆಯಂತೆ! ಗಾಳಿ ಅವನ್ನು ಎತ್ತಲೋ ಎತ್ತಿಕೊಂಡೊಯ್ಯುತ್ತದೆ. ತಲೆ ಕೆಳಗಾಗುತ್ತದೆ. ಹಾರಾಡುತ್ತದೆ. ಕೊನೆಗದು ನೆಲಕ್ಕೆ ಬೀಳುತ್ತದೆ. ಕೆಲವರು ನಕ್ಷತ್ರಗಳಂತೆ! ಅವರ ಜೀವನವೆಲ್ಲ ಏಕಮುಖವಾಗಿ ಸಾಗಿದೆ. ಹೊರಗಿನ ಗಾಳಿ ಅವರ ಮೇಲೆ ಪರಿಣಾಮ ಬೀರಲಾರದು.ಅವರಿಗೆ ತಮ್ಮದೇ ಹಾದಿ.ತಮಗೆ ತಾವೇ ಕೈ ದೀವಟಿಗೆ.ಆದರೆ ಈ ವಿಷಯದಲ್ಲಿ ನಾನರಿತ ಜ್ಞಾನಿಗಳಲ್ಲಿ ಪರಿಪೂರ್ಣನಾದವನು ಒಬ್ಬನೇ. ಅವನನ್ನು ಎಂದೂ ಮರೆಯಲಾರೆ. ಅವನೇ ಗೌತಮ. ಅವನು ಪುರುಷೋತ್ತಮ. ತಾನೇ ತನ್ನ ವಿಚಾರಗಳನ್ನು ಬೋಧಿಸುತ್ತಾನೆ. ಸಾವಿರಾರು ತರುಣರು ದಿನಂಪ್ರತಿ ಅವನ ತತ್ವಬೋಧೆಯನ್ನು ಕೇಳುತ್ತಾರೆ. ಅದನ್ನು ಬಿಡದೆ ಪಾಲಿಸುತ್ತಾರೆ.ಆದರೆ ಅವರೆಲ್ಲ ಉದುರುವ ತರಗೆಲೆಗಳ ಹಾಗೆ. ತಮ್ಮೊಳಗೇ ಆತ್ಮಜ್ಞಾನವಿಲ್ಲ. ತಮ್ಮೊಳಗೇ ಬೆಳಕು ಕಾಣಲಾರರು."

ಕಮಲಾ ಅವನ ಕಡೆ ನೋಡಿದಳು. ಆ ಮೇಲೆ ಮುಗುಳು ನಗುತ್ತ ಹೇಳಿದಳು: "ನೀನು ಮತ್ತೆ ಅವನ ಮಾತನ್ನೆತ್ತುವೆಯಲ್ಲಾ ! ಸನ್ಯಾಸಿಯ ವಿಚಾರಗಳು ಪುನಃ ಬಂದುವೆಂದು ತೋರುತ್ತದೆ."

ಸಿದ್ಧಾರ್ಥ ಸುಮ್ಮನಾದ. ಅವರಿರ್ವರೂ ಪ್ರೇಮಲೀಲೆಯಲ್ಲಿ ಮಗ್ನರಾದರು. ಅವಳ ದೇಹವು ಚಿರತೆಯಷ್ಟು ಮೆತ್ತಗೆ. ಬಿಲ್ಲಿನಂತೆ ಮಣಿಯುತಿತ್ತು. ಅವಳೊಡನೆ ಪ್ರೇಮಲೀಲೆಯಲ್ಲಿ ಆಸಕ್ತರಾದವರು ಅನೇಕ ಸುಖಗಳನ್ನೂ ರಹಸ್ಯಗಳನ್ನೂ ಹೊಂದುತಿದ್ದರು- ದೀರ್ಘಕಾಲದ ವರೆಗೆ ಸಿದ್ಧಾರ್ಥನೊಡನೆ ಅವಳು ಪ್ರೇಮಲೀಲೆಯಾಡಿದಳು. ಅದರಲ್ಲಿ ಅವನನ್ನು ಜಯಿಸಿ

ದಳು. ತನ್ನ ನೈಪುಣ್ಯಕ್ಕಾಗಿ ಸಂತೋಷಿಸಿದಳು. ಕೊನೆಗೆ ಒಳಲಿ ಸಿದ್ಧಾರ್ಥ ಅವಳೊತ್ತಿಗೆ ಒರಗಿದ.

ವೇಶ್ಯೆ ಬಗ್ಗಿ ಆಯಾಸಹೊಂದಿದ ಅವನ ಮೊಗವನ್ನೂ ಕಣ್ಣುಗಳನ್ನೂ ಬಹಳ ಹೊತ್ತಿನ ವರೆಗೆ ನೋಡತೊಡಗಿದಳು.

ಆ ಮೇಲೆ ಅವನ ಕಿವಿಯಲ್ಲಿ ಮೆಲ್ಲನೆ ಪಿಸುಗುಟ್ಟಿದಳು : "ನನ್ನೆಲ್ಲ ಪ್ರೇಮಿಗಳಲ್ಲಿ ನೀನೇ ಮೇಲುಗೈ. ಅವರಿಗಿಂತ ನೀನು ಬಲವಂತ, ಕೋಮಲ, ಸಂತೋಷವುಳ್ಳವನು. ಸಿದ್ಧಾರ್ಥ! ನೀನು ನನ್ನ ಕಲೆಯನ್ನು ಚೆನ್ನಾಗಿ ಗ್ರಹಿಸಿರುವೆ. ಒಂದಲ್ಲದಿದ್ದರೆ ಇನ್ನೊಂದ ದಿನ, ಇನ್ನೂ ಕೆಲವು ವರುಷಗಳ ಮೇಲೆ ನಿನ್ನಿಂದ ನನಗೊಂದು ಮಗುವಾಗಲಿ ! ಆದರೆ ಮನದಲ್ಲಿ, ನೀನು ಇನ್ನೂ ಯತಿಯಾಗಿಯೇ ಇರುವೆ. ನೀನು ನಿಜವಾಗಿಯೂ ನನ್ನನ್ನು ಪ್ರೇಮಿಸುವುದಿಲ್ಲ. ನೀನು ಯಾರನ್ನೂ ಪ್ರೇಮಿಸಲಾರೆ. ಇದು ನಿಜವಲ್ಲವೇ ?"

ಸಿದ್ಧಾರ್ಥ ಬಳಲುವ ಮಾತುಗಳಲ್ಲೇ ಹೇಳಿದ: "ಇರಬಹುದು. ನಾನೂ ನಿನ್ನ ಹಾಗೆಯೇ. ನೀನೂ ಯಾರನ್ನೂ ಪ್ರೇಮಿಸಲಾರೆ. ಇಲ್ಲದಿದ್ದರೆ ಪ್ರೇಮವನ್ನು ಒಂದು ಕಲೆಯನ್ನಾಗಿ ಹೇಗೆ ಉಪಯೋಗಿಸಬಹುದು ಹೇಳು. ಪ್ರಾಯಶಃ ನಮ್ಮಂತಹ ಜನರು ಪ್ರೇಮ ಮಾಡಲರಿಯರು. ಸಾಮಾನ್ಯ ಜನರು ಮಾತ್ರ ಬಲ್ಲರು. ಅದು ಅವರ ರಹಸ್ಯ."



## ೮ ನೆಯ ಅಧ್ಯಾಯ

ಸಿದ್ಧಾರ್ಥ ಸಂಸಾರಿಗನಲ್ಲದಿದ್ದರೂ ಸಂಸಾರಿಗನಂತೆಯೇ ದೀರ್ಘ ಕಾಲದ ವರೆಗೆ ಜೀವಿಸಿದ. ಯತಿಯಾಗಿದ್ದಾಗ ಕೊಂದಿದ್ದ ಪಂಚೇಂದ್ರಿಯಗಳು ಮತ್ತೆ ಚಿಗುರಿ ಸುಖಾತುರ ಪಟ್ಟುವು. ಅವನು ಐಶ್ವರ್ಯ, ಅಧಿಕಾರ, ಮೋಹಗಳನ್ನೆಲ್ಲ ಅನುಭವಿಸಿದ. ಆದರೂ ಬಹುಕಾಲದ ವರೆಗೂ ಹೃದಯದಲ್ಲಿ ಯತಿಯಾಗಿಯೇ ಇದ್ದ. ನಿಪುಣಳಾದ ಕಮಲಾ ಅದನ್ನು ಕಂಡಿದ್ದಳು. ಚಿಂತನೆ, ನೈರಣೆ, ಉಪವಾಸಗಳೇ ಅವನ ಜೀವನದಲ್ಲಿ ಜ್ಯೋತಿಗಳಾಗಿ

ದ್ದುವು. ಪ್ರಾಪಂಚಿಕರು, ಸಾಮಾನ್ಯ ಜನರು, ಇನ್ನೂ ಅವನಿಗಿಂತ ಭಿನ್ನ ವಾಗಿದ್ದರು. ತಾನೂ ಪ್ರತ್ಯೇಕ ಎಂದು ಅವನೂ ಭಾವಿಸಿದ್ದ.

ವರುಷಗಳು ಕಳೆದುವು. ಅವನ ಸುತ್ತುಮುತ್ತಲೂ ಸುಖದ ವಾತಾವ ರಣ ಮುಸುಕಿದ್ದುದರಿಂದ ಈ ವರುಷಗಳು ಹೇಗೆ ಗತಿಸಿದುವೆಂದು ಸಿದ್ಧಾರ್ಥ ನಿಗೆ ಗೊತ್ತಾಗಲಿಲ್ಲ. ಕೆಲವು ವರುಷಗಳ ಮೇಲೆ ಅವನೊಂದು ಸ್ವಂತ ಮನೆ ಯನ್ನು ಕೊಂಡುಕೊಂಡ ಸೇವಕರನ್ನು ನೇಮಿಸಿದ. ನಗರದ ಸಮೀಪವಿರುವ ನದಿಯ ದಂಡೆಯಲ್ಲಿ ಅವನ ಒಂದು ವನವೂ ಇದೆ. ಜನರಿಗೂ ಅವನ ಮೇಲೆ ಪ್ರೀತ್ಯಾದರ. ಹಣ ಕೇಳಲು, ಸಲಹೆ ಕೇಳಲು,ಅವರು ಆಗಾಗ ಬರುತಿದ್ದರು. ಆದರೆ ಕಮಲಾಳನ್ನು ಬಿಟ್ಟರೆ ಅನ್ಯ ಅನ್ಯೋನ್ಯ ಗೆಳೆಯರಾರೂ ಅವನಿ ಗಿದ್ದಿಲ್ಲ.

ತನ್ನ ಕೌಮಾರಾವಸ್ಥೆಯಲ್ಲಿ, ಗೌತಮನ ಬೋಧೆಯನ್ನು ಆಲಿಸಿದ ಬಳಿಕ, ಗೋವಿಂದನನ್ನು ಅಗಲಿದ ಮೇಲೆ, ಅವನು ಅನುಭವಿಸಿದ ಆ ಅನು ಪಮ ವೈಭವ ಪೂರ್ಣ ಜಾಗೃತಿ ಈಗ ಗತಿಸಿದೆ. ಗುರುಗಳೂ ಸಿದ್ಧಾಂತಗಳೂ ಇಲ್ಲದೆ ತಾನೊಬ್ಬನೇ ಸಾಧಿಸುತ್ತೇನೆಂಬ ಗರ್ವ ಇಳಿದಿದೆ. ತನ್ನ ಹೃದಯ ದಲ್ಲಿನ ದೈವೀ ವಾಣಿಯನ್ನು ಕೇಳುವ ನಿರೀಕ್ಷೆ ಸಿದ್ಧತೆಗಳೂ ಕಾಲಕ್ರಮೇಣ ಕೇವಲ ಒಂದು ಸ್ಮರಣೆಯಾಗಿದೆ.

ಒಮ್ಮೆ ಬಹಳ ಹತ್ತಿರವಿದ್ದ ಮತ್ತು ತನ್ನೊಳಗೆ ಭೋರ್ಗರೆದು ಹರಿ ಯುತಿದ್ದ ಪವಿತ್ರ ಮಾನಸ ಸರೋವರದ ಒರತೆ ಈಗ, ದೂರದಲ್ಲಿ ಮೆಲ್ಲಗೆ ಕಲಕಲಾರವ ಮಾಡುತ್ತಿದೆ. ಹಾಗಿದ್ದರೂ ಅವನು ಯತಿಗಳಿಂದ ಕಲಿತ, ಗೌತಮನಿಂದ ಅರಿತ, ತಂದೆಯಿಂದ ತಿಳಿದುಕೊಂಡ, ಬ್ರಾಹ್ಮಣರಿಂದ ಅಭ್ಯಸಿ ಸಿದ, ಮಿತಜೀವನ ಚಿಂತನ ಧ್ಯಾನ ಆತ್ಮಜ್ಞಾನ ಆತ್ಮದ ಅಮರತ್ವ ಇತ್ಯಾದಿ ಅನೇಕ ವಿಷಯಗಳನ್ನು ಅನೇಕ ವರುಷಗಳ ವರೆಗೆ ಮರೆಯಲಿಲ್ಲ.

ಅವುಗಳಲ್ಲಿ ಕೆಲವನ್ನು ಇನ್ನೂ ಅವನು ಪಾಲಿಸಿಕೊಂಡಿದ್ದಾನೆ. ಉಳಿ ದುದೆಲ್ಲ ಮುಳುಗಿವೆ; ಧೂಳಿನಿಂದ ಮುಸುಕಿವೆ. ಕುಂಬಾರನು ಚಕ್ರವನ್ನು ಒಮ್ಮೆ ಜೋರಾಗಿ ತಿರುವಿ ಬಿಟ್ಟ ಮೇಲೆ ಅದು ಬಹಳ ಹೊತ್ತಿನ ವರೆಗೆ ತನ್ನಷ್ಟಕ್ಕೇ ತಿರುಗುತ್ತಿರುತ್ತದೆ. ಕೊನೆಗೆ ಅದರ ಗತಿ ಮೆಲ್ಲಗಾಗುತ್ತದೆ. ಅದು ನಿಂತೂ ಬಿಡುತ್ತದೆ. ಅದರಂತೆಯೇ ಸನ್ಯಾಸಿಯ ಚಕ್ರ, ಆಲೋಚನಾ

ಚಕ್ರ, ವಿವೇಕ ಚಕ್ರಗಳು ಸಿದ್ಧಾರ್ಥನ ಆತ್ಮದಲ್ಲಿ ದೀರ್ಘಕಾಲದ ವರೆಗೆ ತಿರುಗುತಿದ್ದುವು. ಆದರೆ ಮೆಲ್ಲಮೆಲ್ಲಗೆ ಅದು ಶಾಂತವಾಗಿದೆ. ಸಾಯುತ್ತಿರುವ ಮರಕ್ಕೆ ತ್ಯಾವ ಹೊಕ್ಕು, ಅದನ್ನು ಸೇರಿ, ಕೊಳೆಸುವಂತೆ ಪ್ರಾಪಂಚಿಕತನ ಮತ್ತು ಜಡತ್ವಗಳೂ ಸಿದ್ಧಾರ್ಥನ ಆತ್ಮದೊಳಗೆ ನುಸುಳಿದವು. ಕ್ರಮೇಣ ತುಂಬಿದುವು. ಭಾರವೂ ಆಗಿ ಪರಿಣಮಿಸಿದುವು. ಆದರೆ ಅದರ ಬದಲು ಅವನ ಪಂಚೇಂದ್ರಿಯಗಳು ಹೆಚ್ಚು ಹೆಚ್ಚು ಜಾಗೃತವಾದುವು ಅವು ಬಹಳ ಸಂಗತಿಗಳನ್ನು ಕಲಿತುಕೊಂಡುವು. ಬಹಳ ವಿಷಯಗಳನ್ನು ಅನುಭವಿಸಿದುವು.

ವ್ಯಾಪಾರವ ಲೇವಾದೇವಿ ನಡೆಸಲು, ಪರರ ಮೇಲೆ ಅಧಿಕಾರ ಚಲಾಯಿಸಲು, ರಮಣಿಯರೊಡನೆ ರಮಿಸಲು ಸಿದ್ಧಾರ್ಥ ಕಲಿತಿದ್ದ. ಅಂದವಾದ ವಸ್ತ್ರಗಳಿಂದ ಅಲಂಕರಿಸಿಕೊಳ್ಳುತಿದ್ದ. ಅದು ಮಾಡು, ಇದು ಮಾಡು ಎಂದು ಸೇವಕರಿಗೆ ವಿಧಿಸುತ್ತಿದ್ದ. ಸ್ನಾನಕ್ಕೆ ಸುಗಂಧ ನೀರು ! ಅವನಿಗೀಗ ಸಿಹಿ, ಸುರಸ, ರುಚಿಕರ ಊಟಬೇಕು. ಮೀನು, ಮಾಂಸ, ಕೋಳಿ, ಮಸಾಲೆ ಅಡಿಗೆ, ಮೃಷ್ಟಾನ್ನ ಭೋಜನದ ಮೇಲೆಯೇ ಇಷ್ಟ. ಮದ್ಯಪಾನದಿಂದ ವಿಸ್ಮೃತಿ, ಆಲಸ್ಯಗಳೂ ಉಂಟಾದುವು. ಪಗಡೆ, ಚದುರಂಗದಾಟದಲ್ಲೂ ಅವನಿಗೆ ಆಸಕ್ತಿ. ನೃತ್ಯ ನೋಡಲು ಆಸೆ. ಹೋಗಲು ಬರಲು ಪಲ್ಲಕಿ. ಮಲಗಲು ಮೃದುವಾದ ಹಾಸಿಗೆ. ಆದರೂ ತಾನು ಪರಕೀಯ ಮತ್ತು ಪರರಿಗಿಂತ ಶ್ರೇಷ್ಠನೆಂದು ಅವನ ಭಾವನೆ. ಯಾವಾಗಲೂ ಅವರನ್ನು ಸ್ವಲ್ಪ ಉಪಹಾಸದಿಂದ, ತುಚ್ಛೀಕಾರದಿಂದ ನೋಡುತ್ತಿದ್ದ. ಸಾಮಾನ್ಯವಾಗಿ ಸಂಸಾರಿಗರನ್ನು ಕಾಣುವ ಯತಿಗಳ ಹಾಗೆ !

ಕಾಮಸ್ವಾಮಿ ರೇಗಿದರೆ, ಅಪಮಾನಿತನಾದೆನೆಂದು ನೊಂದರೆ ಅಥವಾ ಲೇವಾದೇವಿಯ ಚಿಂತೆ ಮಾಡಿದರೆ ಸಿದ್ಧಾರ್ಥ ಅಪಹಾಸ್ಯ ಮಾಡುತಿದ್ದ, ಆದರೆ ಮೆಲ್ಲಗೆ, ಅವನಿಗೆ ಗೊತ್ತಾಗದಂತೆ,ವರುಷಗಳು ಹೋದ ಹಾಗೆ ಅವನ ಉಪಹಾಸವೂ ಅಡಗಿತು. ಉಚ್ಚಭಾವನೆಯೂ ಕಡಿಮೆಯಾಯಿತು. ಕ್ರಮೇಣ, ಐಶ್ವರ್ಯ ಹೆಚ್ಚಾದಂತೆಲ್ಲ, ಸಾಮಾನ್ಯ ಜನರ ಅನೇಕ ಗುಣಶೀಲಗಳನ್ನು ಸಿದ್ಧಾರ್ಥನೂ ಗಳಿಸಿದ. ಅವರ ಕೆಲವು ಮಕ್ಕಳಾಟಿಕೆ ಮತ್ತು ಕೆಲವು ಚಿಂತೆಗಳೂ ಅವನ ಜೀವನದಲ್ಲಿ ಹಾಸು ಹೊಕ್ಕಾದುವು

ತನ್ನಲ್ಲಿಲ್ಲದ ಮತ್ತು ಅವರಲ್ಲಿರುವ ಒಂದು ವಸ್ತುವನ್ನು ಕಂಡಾಗ

ಅವನು ಅಸೂಯಾಪರನಾಗುತ್ತಿದ್ದ. ಬಾಳುವೆ ಮಹತ್ವವಾದುದೆಂಬ ಭಾವನೆ ಯಿಂದ ಅವರು ಜೀವಿಸುತ್ತಿದ್ದರು. ಸುಖದುಃಖಗಳು ಬಂದಾಗ ಸಂಪೂರ್ಣ ಅದರಲ್ಲೇ ಮುಳುಗುತ್ತಿದ್ದರು. ಯಾವಾಗಲೂ ಪ್ರೇಮಾರಾಧನೆಯ ಸುಖ ಕಾಂಕ್ಷಿಗಳು. ಈ ಜನರಿಗೆಷ್ಟು ಸ್ವಾಭಿಮಾನ! ಮಕ್ಕಳ ಮೇಲೆ ಎಷ್ಟು ಮೋಹ! ಮಾನಮರ್ಯಾದೆಯ ಮೇಲೆ ಎಷ್ಟು ಪ್ರೀತಿ! ಹಣದ ಮೇಲೆ ಎಷ್ಟು ಆಶೆ! ಹೊಸ ಯೋಜನೆ ಆಶೆಗಳ ಕನಸುಗಳನ್ನೂ ಕಾಣುತ್ತಿದ್ದರು.

ಆದರೆ ಸಿದ್ಧಾರ್ಥ ಅವರ ಈ ಮಕ್ಕಳಾಟಿಕೆ, ಸುಖ ಅಥವಾ ಹುಚ್ಚು ತನಗಳನ್ನು ಗಳಿಸಲಿಲ್ಲ. ತಾನು ಅಸಹ್ಯ ಪಡುತ್ತಿದ್ದ ಹೇಯ ಸಂಗತಿಗಳನ್ನು ಮಾತ್ರ ಹೆಕ್ಕಿಕೊಂಡ.

ಆಗಾಗ ಹೀಗೂ ಸಂಭವಿಸಿತು. ರಾತ್ರಿ ಮೋಜು ಮಾಡಿದ ಮೇಲೆ, ಬೆಳಗಾದ ಮೇಲೂ ಬಹಳ ಹೊತ್ತಿನ ವರೆಗೆ ಮಲಗಿದ. ಎಚ್ಚರಗೊಂಡಾ ನಂತರ ಆಲಸ್ಯ. ದೇಹಾಯಾಸ ಕಾಮಸ್ವಾಮಿ ತನ್ನ ಚಿಂತೆಯನ್ನು ಪದೇ ಪದೇ ಹೇಳಿಕೊಂಡರೆ ಸಿದ್ಧಾರ್ಥನಿಗೆ ಬೇಸರ; ಅಸಹನೆ. ಅದರಿಂದ ನೊಂದು ಕೊಳ್ಳುತ್ತಿದ್ದ. ಪಗಡೆ ಜೂಜಾಟದಲ್ಲಿ ತಾನು ಸೋತರೆ ಗಹಗಹಿಸಿ ನಗು ತ್ತಿದ್ದ. ಮಿಕ್ಕ ಸಮಯದಲ್ಲಿ ನಗುತ್ತಿದ್ದುದೇ ವಿರಳ. ಇನ್ನಿತರರಿಗಿಂತ ಅವನ ಮುಖವು ವಿದ್ವೆಯ ತೇಜದಿಂದ ಕಂಗೊಳಿಸುತ್ತಿತ್ತೇನೋ ನಿಜ. ಆದರೆ ಕಾಲ ಕ್ರಮೇಣ ಶ್ರೀಮಂತರ ಮೋರೆಯಲ್ಲಿದ್ದು ತೋರುವ ಅತೃಪ್ತಿ. ಆಲಸ್ಯ, ರೋಗಗ್ರಸ್ತ, ಮುಂಗೋಪ, ನಿಷ್ಕರುಣೆಗಳ ಭಾವನೆಗಳು ತುಂಬಿದುವು. ಮೆಲ್ಲಮೆಲ್ಲನೆ ಶ್ರೀಮಂತರ ಮನೋರೋಗ ಸೇರಿಕೊಂಡಿತು.

ಪರದೆಯಂತೆ, ತೆಳು ಮಂಜಿನಂತೆ, ದಣಿವು ಸಿದ್ಧಾರ್ಥನನ್ನು ಆವರಿ ಸಿತು. ದಿನದಿಂದ ದಿನಕ್ಕೆ ಅದು ದಪ್ಪವಾಯಿತು. ಪ್ರತಿ ತಿಂಗಳೂ ಅದು ದಪ್ಪವಾಯಿತು. ಪ್ರತಿ ತಿಂಗಳೂ ಅದು ಹೆಚ್ಚು ಕಪ್ಪಾಯಿತು. ಪ್ರತಿ ವರುಷ ವದು ಹೆಚ್ಚು ಭಾರವಾಯಿತು. ವರುಷಗಳು ಕಳೆದಾಗ ಹೊಸ ಬಟ್ಟೆ ಹಳೆದಾಗುವಂತೆ, ಬಣ್ಣಗೆಡುವಂತೆ, ಕಲೆಯಿಂದ ತುಂಬುವಂತೆ, ಮಡಿಕೆ ಬೀಳುವಂತೆ, ಅಂಚು ಹರಿವಂತೆ, ಇಲ್ಲಿ ಅಲ್ಲಿ ತೂತು ತೋರುವಂತೆ, ಸಿದ್ಧಾ ರ್ಥನ ಹೊಸ ಜೀವನದ ಗತಿಯೂ ಆಗಿದೆ. ಗೋವಿಂದನನ್ನು ಅಗಲಿ ಬಂದ ಬಳಿಕ ಅವನು ಆರಂಭಿಸಿದ ನವಜೀವನವು ಈಗ ಹಳೆಯದಾಗಿದೆ. ಅರಿವೆ

ಯಂತೆ ಅದು ಬಣ್ಣಗೆಟ್ಟಿದೆ; ಪ್ರಕಾಶಹೀನವಾಗಿದೆ; ಮಡಿಕೆಗಳೂ ಕಲೆಗಳೂ ಹೇರಳವಾಗಿವೆ. ಒಳಗೊಳಗೆ ಅಲ್ಲಲ್ಲಿ ಹೇಸಿಕೆ ಮತ್ತು ಹತಾಶೆ ಅಡಗಿವೆ. ಈಗೊಮ್ಮೆ ಆಗೊಮ್ಮೆ ಅದು ಕಣ್ಣಿಗೆ ಬೀಳುತ್ತವೆ. ಸಿದ್ಧಾರ್ಥನಿಗೆ ಅದು ಕಾಣಲಿಲ್ಲ. ಆದರೆ ಒಮ್ಮೆ ತನ್ನನ್ನು ಎಚ್ಚರಿಸಿದ, ತನ್ನ ಮಾರ್ಗದರ್ಶನ ಮಾಡಿದ ದಿವ್ಯ ಅಂತರ್ವಾಣಿ ಮಾತ್ರ ಈಗ ಸಂಪೂರ್ಣ ಮೌನ ತಾಳಿದೆಯೆಂದು ಅವನಿಗೆ ತೋಚಿತು.

ಪ್ರಪಂಚ ಅವನನ್ನು ಹಿಡಿಯಿತು ಮೋಹ, ಲೋಭ, ಆಲಸ್ಯ, ಮತ್ತು ಅವನು ಯಾವಾಗಲೂ ಅಪಹಾಸ್ಯ ಮಾಡಿ ತಿರಸ್ಕರಿಸುತ್ತಿದ್ದ ಆಶೆಗಳು ಅವನನ್ನು ಸೆರೆಹಿಡಿದುವು. ಆಸ್ತಿಪಾಸ್ತಿ, ಐಶ್ವರ್ಯಗಳೂ ಅವನನ್ನು ಬಲೆಯಲ್ಲಿ ಹಾಕಿಕೊಂಡುವು. ಈಗ ಅದೊಂದು ಆಟವಲ್ಲ. ಅವು ಆಟದ ಸಾಮಾನುಗಳಲ್ಲ. ಅದೊಂದು ಸಂಕೋಲೆ. ತಲೆಭಾರ. ಇದಲ್ಲದೆ ಅಧಃಪತನದ ಕೊನೆಯ ಮೆಟ್ಟಿಲಲ್ಲಿರುವ ಜೂಜಾಟದ ವಿಚಿತ್ರ ಒಡ್ಡದಾರಿಯಲ್ಲಿ ಕೂಡಾ ಸಿದ್ಧಾರ್ಥ ಅಲೆದ.

ಸಿದ್ಧಾರ್ಥ ಹೃದಯದಲ್ಲೂ ಯತಿತ್ವಕ್ಕೆ ತಿಲಾಂಜಲಿ ಎರೆದ ಮೇಲೆ, ಅತ್ಯಾಸಕ್ತಿಯಿಂದ ಹಣ, ಆಭರಣಗಳನ್ನಿಟ್ಟು ಜೂಜಾಡತೊಡಗಿದ. ಮೊದಲು ಸಾಮಾನ್ಯ ಜನರಲ್ಲಿರುವ ಅದೊಂದು ಸಂಪ್ರದಾಯವೆಂದು ಅರಿತು ತಾನೂ ಭಾಗವಹಿಸುತ್ತಿದ್ದ. ಅಷ್ಟೆ. ಆದರೆ ಈಗ ಅವನು ಆ ಆಟದಲ್ಲಿ ಬಹಳ ನಿಪುಣ. ಅವನೊಟ್ಟಿಗೆ ಜೂಜಾಡುವವರು ವಿರಳ. ಏಕೆಂದರೆ ಹಿಂದು ಮುಂದಿನ ವಿಚಾರವಿಲ್ಲದೆ ಅಪಾರ ಹಣವಿಟ್ಟು ಪಂಥ ಕಟ್ಟುತ್ತಿದ್ದ. ಮನಃಪೂರ್ವಕವಾಗಿ ಅವನು ಜೂಜಾಟವಾಡುತ್ತಿದ್ದ.

ಜೂಜಾಟ, ಅಪವ್ಯಯಗಳಿಂದ ಹಣ ಹಾಳು ಮಾಡುವ ಸುಖದಲ್ಲೂ ಅವನಿಗೆ ವ್ಯಾಮೋಹ. ಇನ್ನಾವ ವಿಧದಿಂದಲೂ ಈ ರೀತಿ ಐಶ್ವರ್ಯದ ಅಪಹಾಸ, ತಿರಸ್ಕಾರ ಮಾಡಲು ಅವನಿಗೆ ಅಶಕ್ಯ. ಹೀಗಾಗಿ ತನ್ನನ್ನು ತಾನೇ ಅಪಹಾಸ್ಯ ಮಾಡುತ್ತ, ದೂರುತ್ತ, ಹಳಿದುಕೊಳ್ಳುತ್ತ ಅಪಾರ ಸಂಪತ್ತನ್ನು ಪಣವಾಗಿಟ್ಟ. ಸಾವಿರಗಟ್ಟಲೆ ಗೆದ್ದ. ಮತ್ತೆ ಅದನ್ನೇ ಪಣವಾಗಿರಿಸಿದ. ಅದನ್ನು ಕಳೆದುಕೊಂಡ. ಆ ಮೇಲೆ ಆಭರಣಗಳನ್ನಿಟ್ಟ. ಅದೂ ಕೈ ಬಿಟ್ಟಿತು. ತನ್ನ ಮನೆಯನ್ನಿಟ್ಟ. ಅದೂ ಕುಸಿಯಿತು. ಉಳಿದುದೆಲ್ಲ

ವನ್ನೂ ಪಣವಿಟ್ಟ. ಎಲ್ಲವನ್ನೂ ಗಳಿಸಿದ. ಈ ಪಗಡೆ ಜೂಜಿನ ಈ ಚಿಂತೆ ಕುತೂಹಲಗಳಲ್ಲಿ ಅವನಿಗೆ ಆಸಕ್ತಿ. ಒಮ್ಮೊಮ್ಮೆ ಅಪಾರ ದ್ರವ್ಯವನ್ನು ಋಣವಾಗಿಡುವಾಗ ಅನುಭವವಾಗುವ ಚಿಂತೆ, ಭಯಗಳು ಅಷ್ಟಿಷ್ಟಲ್ಲ. ಸಿದ್ಧಾರ್ಥನಿಗೆ ಆ ಅನುಭವದಲ್ಲೂ ಪ್ರೀತಿ. ಈ ಅನುಮಾನ, ಕುತೂಹಲ, ಚಿಂತೆಗಳನ್ನು ಪುನಃ ಪುನಃ ಅನುಭವಿಸಲು, ಅವನ್ನು ಅತಿರೇಕಗೊಳಿಸಲು ಅವನ ಇಚ್ಛೆ. ಏಕೆಂದರೆ, ಅವನ ಇಂದಿನ ಈ ತೃಪ್ತ, ಮಂದ, ನಿಸ್ಸಾರ ಜೀವನದಲ್ಲಿ ಅವರಿಂದಲೇ ಅವನಿಗೆ ಸುಖ, ಒಂದು ಬಗೆಯ ಉದ್ವೇಗ, ಜೀವನ ಕ್ಷೋಭೆಗಳು ಅನುಭವಕ್ಕೆ ಬರುತ್ತಿದ್ದುವು.

ಜೂಜಾಟದಲ್ಲಿ ಬಹಳ ಸಂಪತ್ತು ನಷ್ಟವಾದಾಗಲೆಲ್ಲ ಪುನಃ ಸಂಪಾದಿಸಲು ಹೆಣಗಿದ. ಅಭಿಲಾಷೆಯಿಂದ ವ್ಯಾಪಾರಮಾಡಿದ. ಸಾಲ ತೀರಿಸಲು ಒತ್ತಾಯಮಾಡಿದ. ಏಕೆಂದರೆ ಪುನಃ ಜೂಜಾಡಲು ಅವನ ಇಚ್ಛೆ. ಪುನಃ ಹಣ ಹಾಳುಮಾಡಲು ಅವನ ಆತುರ ಶ್ರೀಮಂತಿಕೆಯ ತುಚ್ಛೀಕಾರ ಮಾಡಲು ಮತ್ತೆ ಮತ್ತೆ ಅವನ ಲವಲವಿಕೆ. ಒಮ್ಮೊಮ್ಮೆ ಜೂಜಾಟದಲ್ಲಿ ನಷ್ಟವೊದಗಿದಾಗ ಸೈರಣೆಗೆಟ್ಟ. ಸಾಲತೀರಿಸದೇ ಇದ್ದವರನ್ನು ಬೈದ. ಭಿಕ್ಷುಕರ ಮೇಲಿನ ದಯಾಮಯವೂ ಮಾಯವಾಯಿತು. ಬಡವರಿಗೆ ಸಾಲ ಅಥವಾ ಇನಾಮು ಕೊಡುವ ಇಚ್ಛೆಯ ಬಾಗಿಲೂ ಮುಚ್ಚಿತು. ಪಗಡೆ ಜೂಜಿನಲ್ಲಿ ಸಾವಿರಾರು ನಾಣ್ಯಗಳನ್ನು ಚೆಲ್ಲಿ, ಗಹಗಹಿಸುತ್ತಿದ್ದವನು ಕೈಬಿಗಿಹಿಡಿದ ಮತ್ತು ವ್ಯಾಪಾರದಲ್ಲಿ ಅಲ್ಪತನ ತೋರಿದ. ರಾತ್ರಿ ದ್ರವ್ಯದ ಕನಸು ಕಾಣತೊಡಗಿದ.

ಒಮ್ಮೊಮ್ಮೆ ಈ ಅಸಹ್ಯ ಮಾಯಾಜಾಲದಿಂದ ಅವನು ಎಚ್ಚರಗೊಂಡಾಗ, ಮಲಗುವ ಕೋಣೆಯ ಗೋಡೆಯಲ್ಲಿ ತೂಗಹಾಕಿದ ಕನ್ನಡಿಯಲ್ಲಿ ತನ್ನ ಕುರೂಪ ಮತ್ತು ವೃದ್ಧಾಪ್ಯದ ಪ್ರತಿಬಿಂಬವನ್ನು ನೋಡಿದಾಗ, ನಾಚಿಕೆ ಓಕರಿಕೆಗಳುಂಟಾದಾಗ, ಅವನು ಅಲ್ಲಿಂದ ಓಡಿದ. ಜೂಜಾಟಕ್ಕೆ ಓಡಿದ. ಮನೋ ಗೊಂದಲದಿಂದ ಮನೋರಮೆಯಾದ ಕಮಲೆಯ ಮನೆಗೋಡಿದ. ಕುಡಿದ ಅಲ್ಲಿಂದ ಹಣ ಸಂಪಾದನೆ ಮತ್ತು ಸಂಗ್ರಹಕ್ಕಾಗಿ ಮರಳಿದ. ಈ ಅರ್ಥವಿಲ್ಲದ ಚಕ್ರದಲ್ಲೇ ಅವನು ಜರ್ಜರಿತನಾದ; ಮುದುಕನಾದ! ರೋಗರುಜೆಗಳೂ ಬಾಧಿಸಿದುವು. ಒಂದು ದಿನ ಸಂಜೆ ಅವನು ಕಮಲೆ

ಯೊಡನೆ ಅವಳ ಮನೋಹರವಾದ ಉದ್ಯಾನವನದಲ್ಲಿದ್ದ. ಅವರು ಮಾತ ನಾಡುತ್ತ ಒಂದು ಮರದ ಕೆಳಗೆ ಕುಳಿತರು. ಕಮಲಾ ಗಂಭೀರವಾಗಿ ಮಾತ ನಾಡುತ್ತಿದ್ದಳು. ಅವಳ ಮಾತುಗಳಲ್ಲಿ ದುಃಖವೂ ಬೇಸರವೂ ಹುದುಗಿತ್ತು. ಗೌತಮನ ಬಗ್ಗೆ ಹೇಳೆಂದು ಅವಳು ಕೇಳಿದಳು. ಎಷ್ಟು ಕೇಳಿದರೂ ಇನ್ನೂ ಕೇಳಲು ಅವಳ ಆಸೆ. ಅವನ ಕಣ್ಣುಗಳು ಎಷ್ಟು ನಿರ್ಮಲ, ಬಾಯಿ ಎಷ್ಟು ಸುಂದರ, ನಗುವೆಷ್ಟು ಆಹ್ಲಾದಕರ, ಅವನೆಷ್ಟು ದಯಾಮಯಿ, ನಡೆನುಡಿ ಎಷ್ಟು ಶಾಂತ ಇವನ್ನು ಮತ್ತೆ ಮತ್ತೆ ಕೇಳಿದಳು.

ಬಹಳ ಹೊತ್ತಿನ ವರೆಗೆ ಅವನು ಆ ಮನುಜಶ್ರೇಷ್ಠನ ಗುಣವರ್ಣನೆ ಮಾಡಬೇಕಾಯಿತು. ಅದನ್ನು ಕೇಳಿ ಕಮಲಾ ನಿಟ್ಟುಸಿರಿಟ್ಟಳು. "ಒಂದಲ್ಲ ದಿದ್ದರೆ ಇನ್ನೊಂದುದಿನ, ಪ್ರಾಯಶಃ ಬೇಗನೇ, ನಾನೂ ಆ ಬುದ್ಧನ ಬಸು ಯಾಯಿ ಆಗುತ್ತೇನೆ. ನನ್ನ ತೋಪನ್ನು ಅವನಿಗೆ ಅರ್ಪಿಸಿ ಅವನ ಉಪದೇ ಶದ ಆಶ್ರಯಹೊಂದುವೆ" ಎಂದು ನುಡಿದಳು. ಆದರೆ ಮತ್ತೆ ಮುಗುಳು ನಗುತ್ತ ಸಿದ್ಧಾರ್ಥನನ್ನು ಮರುಳುಗೊಳಿಸಿದಳು. ಪ್ರೇಮಚೇಷ್ಟೆಮಾಡುತ್ತ ಅತ್ಯಾಶೆಯಿಂದ ಅವನನ್ನು ಒಲವಾಗಿ ಆಲಿಂಗಿಸಿದಳು ಇಂಗುತ್ತಿರುವ ಸುಖದ ಕೊನೆಯ ಸವಿಹನಿಯನ್ನು ಪುನಃ ಉಣಲೆತ್ನಿಸುವ ಆತುರದಿಂದ ತಬ್ಬಿ ಕೊಂಡಳೋ ಏನೋ !

ಮೋಹಕ್ಕೂ ಮರಣಕ್ಕೂ ಎಷ್ಟು ನಿಕಟ ಬಾಂಧವ್ಯವಿದೆಯೆಂದು ಅಷ್ಟರವರೆಗೆ ಸಿದ್ಧಾರ್ಥನಿಗೆ ಅಷ್ಟು ಸ್ಪಷ್ಟವಾಗಿ ಗೋಚರಿಸಿರಲಿಲ್ಲ. ಪ್ರೇಮ ಲೀಲೆ ಮುಗಿದಮೇಲೆ ಅವಳೊತ್ತಿಗೇ ಮಲಗಿಕೊಂಡ. ಅವಳ ಮುಖದಲ್ಲಿ ಮುಖವಿಟ್ಟು ಒರಗಿದ. ಆಗ ಅವಳ ಕಣ್ಣುಗಳ ಹಾಗೂ ಕಡೆಬಾಯಿಯ ಕಡೆ ಗಳಲ್ಲಿ ದುಃಖದ ಚಿಹ್ನೆ ಅಥವಾ ನೆರಿಗೆಗಳನ್ನು ಪ್ರಥಮ ಸಲ ಕಂಡ. ಅವು ಜೀವನದ ಶರತ್ಕಾಲ ಮತ್ತು ವೃದ್ಧಾಪ್ಯದ ಚಿಹ್ನೆಗಳು! ಸಿದ್ಧಾರ್ಥನ ವಯಸ್ಸು ನಲ್ವತ್ತರ ಒಳಹೊರಗೆ. ಆದರೂ ತನ್ನ ಕರಿಗೂದಲಿನ ಮಧ್ಯೆ ಇಲ್ಲೊಂದು ಅಲ್ಲೊಂದು ನರೆಗೂದಲನ್ನೂ ಕಂಡಿದ್ದ. ಕಮಲೆಯ ಸುಂದರ ವದನಾರ ವಿಂದದಲ್ಲಿ ದಣುವು ತುಂಬಿತ್ತು; ಆನಂದದ ಗುರಿಯಿಲ್ಲದ ದೀರ್ಘ ರಸ್ತೆಯಲ್ಲಿ ನಡೆದ ಆಯಾಸ ಕಾಣುತಿತ್ತು. ಅಕಾಲಿಕ ವೃದ್ಧಾಪ್ಯದ ಬೇಸರವಿತ್ತು. ಇದ ಲ್ಲದೆ ಜೀವನದ ಶರದೃತುವಿನ, ಮುಪ್ಪಿನ ಹಾಗೂ ಸಾವಿನ ಭಯದ ಚಿಹ್ನೆ

ಗಳೂ ಅಡಗಿದ್ದುವು. ಸಿದ್ಧಾರ್ಥ ನಿಟ್ಟುಸಿರುಬಿಡುತ್ತ ಅವಳನ್ನು ಬೀಳ್ಕೊಂಡ. ಅವನೆದೆಯಲ್ಲಿ ಅನಂತ ಸಂವೇದನೆಗಳೂ ಗೂಢ ಭಯಗಳೂ ತುಂಬಿದುವು

ಅಲ್ಲಿಂದ ತನ್ನ ಮನೆಗೆ ಮರಳಿದ ಸಿದ್ಧಾರ್ಥ, ನರ್ತಕಿಯರೊಂದಿಗೆ ಮತ್ತು ಮದ್ಯಪಾನದಿಂದಲೇ ಆ ರಾತ್ರಿಯನ್ನು ಕಳೆದ ತನ್ನ ಸಂಗಾತಿಗಳಿಗಿಂತ ತಾನೇ ಶ್ರೇಷ್ಠನೆಂಬಂತೆ ವರ್ತಿಸಿದ. ನಿಜವಾಗಿಯೂ ಹಾಗಿರಲಿಲ್ಲ. ಅವನು ಯಥೇಚ್ಛ ಮದ್ಯ ಕುಡಿದ. ಮಧ್ಯರಾತ್ರಿಯಾದ ಮೇಲೆ ಬಳಲಿ, ಬೆಂಡಾಗಿ, ಕಂಗಾಲಾಗಿ, ಹತಾಶನಾಗಿ, ದುಃಖಿಸುತ್ತ ಹಾಸಿಗೆ ಸೇರಿದ ಎಷ್ಟು ಯತ್ನಿಸಿದರೂ ನಿದ್ದೆ ಹತ್ತಲಿಲ್ಲ. ಅವನ ಹೃದಯದಲ್ಲಿ ದುಃಖ ತುಂಬಿದೆ. ಸೈರಿಸಲಾರದವನಾಗಿದ್ದೇನೆಂದು ಅವನಿಗೂ ಭಾಸವಾಗಿದೆ. ಕೆಟ್ಟ ರುಚಿಯುಳ್ಳದ ಮದ್ಯದಂತೆ, ಮಧುರವಾಗಿದ್ದರೂ ಅರ್ಥವಿಲ್ಲದ ಸಂಗೀತದಂತೆ, ನರ್ತಕಿಯರ ಮುಗುಳು ನಗುವಿನಂತೆ, ಅವರ ತಲೆಗೂದಲು ಮತ್ತು ಮೊಲೆಗಟ್ಟಿನ ಅತಿಸುವಾಸನೆಯಂತೆ ಸಿದ್ಧಾರ್ಥ ಅಸಹ್ಯಪಡತೊಡಗಿದ.

ಅವೆಲ್ಲಕ್ಕಿಂತಲೂ ತನ್ನ ಪರಿಮಳದ ತಲೆಗೂದಲು, ಬಾಯಿಂದ ಹೊರ ಬರುತ್ತಿರುವ ಮದ್ಯದ ವಾಸನೆ, ಮೈಚರ್ಮದ ಮೃದುತ್ವ ಮತ್ತು ಶೈಥಿಲ್ಯ ಇವೆಲ್ಲವನ್ನು ಕಂಡು ತನಗೆ ತಾನೇ ಅಸಹ್ಯಪಡತೊಡಗಿದ. ಅತಿಯಾಗಿ ತಿಂದುಂಡು ಕುಡಿದವನು ಓಕರಿಕೆ ಮಾಡಿದ ಮೇಲೆ ಸಂಕಟದಿಂದ ಪಾರಾದೆನೆಂದು ಭಾವಿಸುವಂತೆ, ಚಡಪಡಿಸುವ ಈ ಮನುಷ್ಯನು ಕೂಡಾ ಎಲ್ಲ ಮೋಹ, ಚಟ, ಅರ್ಥವಿಲ್ಲದ ಜೀವನವನ್ನು ಒಮ್ಮೆ ಕಾರಿಕೊಂಡು ಬಿಡುಗಡೆ ಹೊಂದಬೇಕೆಂದು ಬಯಸಿದ. ಸೂರ್ಯೋದಯ ಕಾಲಕ್ಕೆ, ಅವನ ಮನೆಯ ಹೊರಗೆ ಜನರ ದಿನನಿತ್ಯದ ಚಟುವಟಿಕೆ ಆರಂಭವಾದಾಗ ಅವನಿಗೆ ಸ್ವಲ್ಪ ಜೊಂಪು ಹತ್ತಿತು. ಆಗ ಅವನೊಂದು ಕನಸು ಕಂಡ.

ಕಮಲಾ ಒಂದು ಸಣ್ಣ ಬಂಗಾರದ ಪಂಜರದಲ್ಲಿ ಒಂದು ಚಿಕ್ಕ ಹಾಡುವ ಹಕ್ಕಿಯನ್ನು ಸಾಕಿದ್ದಳು. ಈ ಹಕ್ಕಿಯೇ ಸಿದ್ಧಾರ್ಥನ ಕನಸಿನಲ್ಲಿ ಕಾಣಿಸಿತು. ದಿನಂಪ್ರತಿ ಬೆಳಗು ಮುಂಜಾನೆ ಹಾಡುವುದು ಈ ಹಕ್ಕಿಯ ಅಭ್ಯಾಸ. ಆದರೆ ಈ ದಿನ ಅದು ಮೌನವಾಗಿತ್ತು. ಅಚ್ಚರಿಗೊಂಡ ಸಿದ್ಧಾರ್ಥ ಆ ಗೂಡಿನ ಸಮೀಪ ಹೋಗಿ ಒಳಗೆ ಇಣಿಕಿದ. ಹಕ್ಕಿ ಸತ್ತು ಗೂಡಿನ ಬುಡದಲ್ಲಿ ಬಿದ್ದಿತ್ತು. ಅವನು ಅದನ್ನು ಹೊರತೆಗೆದು, ಒಂದು ಕ್ಷಣ ಕೈಯಲ್ಲಿ

ಹಿಡಿದುಕೊಂಡ ಆ ಮೇಲೆ ಅವನ್ನು ಹೊರಗೆ ರಸ್ತೆಗೆಸೆದ ಅದರ ಸತ್ತ ಈ ಹಕ್ಕಿಯೊಂದಿಗೆ ತನ್ನಲ್ಲಿದ್ದ ಸದ್ಗುಣಗಳನ್ನೂ ತಾನು ಹೊರಗೆಸೆದಂತೆ ಭಾಸವಾಗಿ ಭಯಪಟ್ಟ. ಅದರಿಂದ ಅವನ ಮನಸ್ಸಿಗೂ ಬಹಳ ನೋವಾಯಿತು.

ಅಷ್ಟರಲ್ಲಿ ಕನಸಿನಿಂದ ಅವನು ಎಚ್ಚತ್ತ. ಅವನ ದುಃಖವೂ ಮಿತಿಮೀರಿತು. ಹುಚ್ಚನಂತೆ ನಿಷ್ಪ್ರಯೋಜಕವಾಗಿ ಜೀವನವನ್ನು ಸವೆಸಿದೆ ಎಂದು ಅವನಿಗೆ ತೋಚಿತು. ಅವನಲ್ಲಿ ಅಮೂಲ್ಯವಾದುದು, ಯೋಗ್ಯವಾದುದು ಯಾವುದೂ ಉಳಿದಿಲ್ಲ. ಬಿರುಗಾಳಿಗೆ ಹಡಗಪೂಡೆದು ಹಾಗೂ ಹೇಗೂ ದಡದಲ್ಲಿ ಬಂದು ಬಿದ್ದ ಮನುಷ್ಯನಂತೆ ಅವನ ಗತಿಯಾಗಿದೆ.

ಸಿದ್ಧಾರ್ಥ ವ್ಯಸನದಿಂದ ತನ್ನ ಮನೋಹರ ವನ ಸೇರಿ, ಒಳಗಿನಿಂದ ಅದರ ಬಾಗಿಲ ಚಿಲುಕ ಹಾಕಿಕೊಂಡು, ಒಂದು ಮಾವಿನ ಮರದಡಿ ಕುಳಿತ. ಅವನ ಹೃದಯದಲ್ಲಿ ದಿಗಿಲು ಮತ್ತು ಸಾವು ಹೊಕ್ಕಂತಾಯಿತು. ತಾನು ಸಾಯುತಿದ್ದೇನೆ, ಉದುರುತಿದ್ದೇನೆ, ಕೊನೆಗಾಲ ಬಂತೆಂದು ಭಾವಿಸಿದ. ಕ್ರಮೇಣ, ಬಾಲ್ಯದಿಂದ ಇಂದಿನ ವರೆಗಿನ ತನ್ನ ಜೀವನವನ್ನು ಅವನು ಪರಿಭಾವಿಸಿದ. ಅವನು ನಿಜವಾಗಿಯೂ ಸುಖಿಯಾಗಿದ್ದುದು ಯಾವಾಗ? ಅವನು ಆನಂದವನ್ನು ಅನುಭವಿಸಿದುದು ಯಾವಾಗ? ಹೌದು. ಅವನು ಅನೇಕ ಸಲ ಅದನ್ನು ಅನುಭವಿಸಿದುದುಂಟು. ಬಾಲ್ಯದಲ್ಲಿ ಬ್ರಾಹ್ಮಣರು ಅವನನ್ನು ಪ್ರಶಂಸಿಸಿದಾಗ, ತನ್ನೆಲ್ಲ ಸಂಗಾತಿಗಳಿಗಿಂತಲೂ ಬುದ್ಧಿವಂತನೆಂದೆನ್ನಿಸಿಕೊಂಡಾಗ, ಪವಿತ್ರ ಶ್ಲೋಕಗಳ ಪಠನದಲ್ಲಿ ಅವನು ಎಲ್ಲರಿಗಿಂತಲೂ ಜಾಣನೆಂದು ಹೆಸರು ಗಳಿಸಿದಾಗ, ವಿದ್ವಾಂಸರೊಡನೆ ಸಂಭಾಷಣೆ ನಡೆಸಿದಾಗ, ಯಾಗಯಜ್ಞಗಳಲ್ಲಿ ನೆರವಾದಾಗ, ಆ ಅನುಭವದ ಸಿಹಿ ಲಭಿಸಿತ್ತು. "ನಿನ್ನ ಭವಿಷ್ಯವು ಉಜ್ವಲವಾಗಿದೆ. ಆ ದಾರಿಯಲ್ಲಿ ನಡೆ. ದೇವತೆಗಳೂ ಮೆಚ್ಚದೇ ಇರಲಾರರು" ಎಂದು ಆಗ ಅವನಿಗೆ ಅನ್ನಿಸಿತ್ತು.

ಮತ್ತೆ ಕೌಮಾರವಸ್ಥೆಯಲ್ಲೂ ಅವನ ಉತ್ಕಟೇಚ್ಛೆಯು ಅವನನ್ನು ಹಿಂದೆ ಮುಂದೆ ಎಳೆದೊಯ್ದಾಗ, ಬ್ರಾಹ್ಮಣರ ಬೋಧೆಯನ್ನು ತಿಳಿದುಕೊಳ್ಳಲೆತ್ನಿಸಿದಾಗ, ಹೊಸ ಜ್ಞಾನ ಗಳಿಸಿದ ಕೂಡಲೇ ಮತ್ತೆ ಹೊಸ ಜ್ಞಾನದಾಹವುಂಟಾದಾಗ ಅವನು, "ಮುಂದೆ ನಡೆ. ಮುಂದೆ ನಡೆ. ಇದೇ ನಿನ್ನ ದಾರಿ" ಎಂದು ಯೋಚಿಸಿದ್ದ. ಸನ್ಯಾಸಿಯಾಗಲು ಮನೆಯನ್ನು ತ್ಯಜಿಸಿ ಬಂದಾಗಲೂ

ಪರಿಪೂರ್ಣನಾದ ಬುದ್ಧನನ್ನು ನೋಡಲು ಸನ್ಯಾಸಿಗಳನ್ನು ಬಿಟ್ಟು ಬಂದಾಗಲೂ ಮತ್ತೆ ಆ ಅವೇದ್ಯ ಜ್ಞಾನದಾಹದಿಂದ ಬುದ್ಧನನ್ನು ಅಗಲಿ ಬಂದಾಗಲೂ ಆ ವಾಣಿ ನುಡಿಯುತಿತ್ತು.

ಈ ದಿವ್ಯ ವಾಣಿಯನ್ನು ಕೇಳಿ ಇಂದಿಗೆ ಎಷ್ಟು ಕಾಲವಾಯಿತು? ಅವನು ಉನ್ನತ ಮಾನಸಗಿರಿಯನ್ನೇರದೆ ಎಷ್ಟು ಸಮಯವಾಯಿತು? ಅವನ ದಾರಿ ಎಷ್ಟು ಹಾಳು! ಎಷ್ಟು ಸರಾಗ! ಉನ್ನತ ಧ್ಯೇಯ, ಬಾಯಾರಿಕೆ, ಮಾನಸಸಮೃದ್ಧಿಯಿಲ್ಲದೆ ಎಷ್ಟು ವರುಷಗಳು ಕಳೆದುವು! ಅಲ್ಪ ಸುಖದಿಂದ ಅವನು ಸಂತುಷ್ಟನಾಗುತಿದ್ದ. ಆದರೂ ಎಂಗೂ ನಿಜವಾದ ತೃಪ್ತಿ ಲಭಿಸಿಲ್ಲ. ಇದನ್ನರಿಯದೆ ಸಾಮಾನ್ಯ ಜನರಂತೆ, ಈ ಪ್ರಾಪಂಚಿಕ ಶಿಶುಗಳಂತೆ ಬಾಳಿ ಬದುಕಲು ಇಷ್ಟು ವರುಷಗಳವರೆಗೂ ಅವನು ಯತ್ನಿಸಿದ! ಆದರೆ ಅವರ ಜೀವನಕ್ಕಿಂತಲೂ ಅವನದು ಹೇಯ, ಕೆಟ್ಟದು ಏಕೆಂದರೆ ಅವರ ಆಶೆ ಆಕಾಂಕ್ಷೆಗಳು ಅವನದಲ್ಲ. ಅವರ ದುಃಖ ಚಿಂತೆಗಳೂ ಅವನದಲ್ಲ.

ಕಾಮಸ್ವಾಮಿ ಪ್ರಪಂಚವೆಲ್ಲ ಅವನಿಗೊಂದು ಆಟ, ನಾಟಕ. ನೋಡುವಂತಹ ಒಂದು ಸುಖಾಂತ ನಾಟಕವಾಗಿತ್ತು ಅವನಿಗೆ. ಕಮಲಾ ಮಾತ್ರ ಅವನ ಪ್ರೇಮಪಾತ್ರಳಾಗಿದ್ದಳು. ಅವನಿಗೆ ಬೇಕಾಗಿದ್ದಳು ಆದರೆ ಈಗ? ಈಗ ಕೂಡಾ ಅವಳು ಅವನಿಗೆ ಬೇಕಾಗಿರುವಳೇ? ಅವಳಿಗೆ ಅವನ ಅಗತ್ಯವಿದೆಯೇ? ಅವರಿರ್ವರೂ ಆದಿ ಅಂತ್ಯವಿಲ್ಲದ ಒಂದು ಹುಚ್ಚಾಟದಲ್ಲಿ ನಿರತರಾಗಿರುವರಲ್ಲವೇ? ಅದಕ್ಕಾಗಿ ಬಾಳಬೇಕೆ? ಇಲ್ಲ ಈ ಹುಚ್ಚಾಟವೇ ಸಂಸಾರ. ಇದು ಮಕ್ಕಳಾಟ. ಒಮ್ಮೆ, ಎರಡು ಸಲ, ಹತ್ತುಸಲ ಈ ಆಟದ ಸುಖಪಡಬಹುದು. ಆದರೆ ಸತತ ಈ ಆಟದಲ್ಲಿ ತನ್ಮಯರಾಗುವುದಲ್ಲಿ ಅರ್ಥವಿದೆಯೇ?

ಈ ಆಟ ಇಲ್ಲಿಗೆ ಮುಗಿಯಿತು. ಇನ್ನುಮುಂದೆ ಆಡಲಾರೆ ಎಂದು ಸಿದ್ಧಾರ್ಥನಿಗೆ ಗೊತ್ತಾಯಿತು ಅವನ ದೇಹ ನಡುಗಿತು. ಏನೋ ಒಂದು ಸತ್ತುಹೋದ ಹಾಗಾಯಿತು.

ಅವನು ಆ ಇಡೀ ದಿನ ಆ ಮಾವಿನ ಮರದ ಕೆಳಗೇ ಕುಳಿತು ಆಲೋಚಿಸಿದ. ತನ್ನ ತಂದೆ, ಗೋವಿಂದ, ಗೌತಮ ಅವರನ್ನು ಯೋಚಿಸಿದ. ಕಾಮಸ್ವಾಮಿಯಾಗಲು ಇವರನ್ನೆಲ್ಲ ತಾನು ಬಿಟ್ಟು ಬಂದೆನೇ? ಹಗಲುರುಳಿ

ಇರುಳು ಬೆಳೆಯಿತು. ತಲೆಯೆತ್ತಿ ಆಕಾಶದಲ್ಲಿ ಮಿನುಗುವ ತಾರೆಗಳನ್ನು ನೋಡಿದ. "ಓಹೋ, ನನ್ನ ವನದಲ್ಲಿ, ನನ್ನ ಮಾವಿನಮರದ ಬುಡದಲ್ಲಿ ನಾನು ಕುಳಿತಿದ್ದೇನೆ" ಎಂದು ಹೇಳಿಕೊಂಡ. ಮತ್ತೆ ಅವನಿಗೆ ನಗುಬಂತು. ಇದರ ಅವಶ್ಯಕತೆಯೇನು? ಇದು ಸರಿಯೇ? ತನಗೊಂದು ವನ, ಈ ಮಾವಿನ ಮರ ಇವೆಲ್ಲ ಏಕೆ? ಇದು ಹುಚ್ಚುತನವಲ್ಲವೇ ಹೇಗೆ ?

ಅದು ಇನ್ನು ಬೇಡ. ಅದರ ಮೋಹ ಕೂಡಾ ಅಳಿಯಿತು. ಅವನು ಎದ್ದು ಆ ಮಾವಿನ ಮರ, ವನವನ್ನೇ ಬಿಟ್ಟುಹೋದ. ಆ ದಿನವಿಡೀ ಊಟ ವನ್ನೇ ಮಾಡಿರಲಿಲ್ಲ ಆದುದರಿಂದ ವಿಪರೀತ ಹಸಿವೆಯಾಯ್ತು. ನಗರದಲ್ಲಿ ರುವ ತನ್ನ ಮನೆ, ಕೋಣೆ, ಹಾಸಿಗೆ, ಮೇಜಿನ ಮೇಲಿನ ದಿವ್ಯಭೋಜನಗಳ ನ್ನೆಲ್ಲ ನೆನಸಿಕೊಂಡ. ಬೇಸರದಿಂದ ನಕ್ಕ. ತಲೆಯಲ್ಲಾಡಿಸುತ್ತ ಅವುಗಳ ಪ್ರೀತಿಯನ್ನೂ ಬಿಟ್ಟುಬಿಟ್ಟ.

ಅದೇ ರಾತ್ರಿ ಸಿದ್ಧಾರ್ಥ ಆ ವನ, ನಗರಗಳನ್ನೂ ಬಿಟ್ಟು ಹೋದ. ಮತ್ತೆ ಮರಳಲಿಲ್ಲ. ಕಾಮಸ್ವಾಮಿ ದೀರ್ಘಕಾಲದ ವರೆಗೂ ಅವನನ್ನು ಹುಡುಕಿಸಿದ. ಪ್ರಾಯಶಃ ದರೋಡೆಗಾರರ ಕೈಗೆ ಸಿಕ್ಕನೋ ಏನೋ ಎಂದ ವನ ಹೆದರಿಕೆ. ಕಮಲಾ ಮಾತ್ರ ಹುಡುಕಲೆತ್ನಿಸಲಿಲ್ಲ. ಸಿದ್ಧಾರ್ಥನ ಸುಳಿವೇ ಇಲ್ಲವೆಂದು ಅವಳು ಕೇಳಿದಾಗ ಅದರಿಂದ ಅವಳಿಗೇನೂ ಆಶ್ಚರ್ಯ ವಾಗಲಿಲ್ಲ. ಅದನ್ನು ಅವಳು ಯಾವಾಗಲೂ ನಿರೀಕ್ಷಿಸಿಯೇ ಇದ್ದಳು ಅವನು ಮನೆಮಾರಿಲ್ಲದ ಯತಿ, ಯಾತ್ರಿಕನಲ್ಲವೇ? ಕೊನೆಯ ಮಿಲನದಲ್ಲೇ ಅವಳು ಅದನ್ನು ಚೆನ್ನಾಗಿ ಕಂಡಿದ್ದಳು ಆದರೆ ಸಿದ್ಧಾರ್ಥನನ್ನು ಕಳೆದು ಕೊಂಡುದುದರಿಂದ ಅವಳು ಸಂಕಟಪಡದೇ ಇರಲಿಲ್ಲ. ಆದರೆ ಆ ಕೊನೆಯ ಸಲ ಭೇಟಿಯಾದಾಗ ತಾನು ಅತ್ಯಾಶೆಯಿಂದ ತನ್ನ ಹೃದಯಕ್ಕೆ ಅವನನ್ನು ಬರಸೆಳೆದು ಅಪ್ಪಿಕೊಂಡೆ, ಅವನು ಸಂಪೂರ್ಣ ವಶವಾದ ಮತ್ತು ತನ್ನನ್ನು ಸಂಪೂರ್ಣ ಸೋಲಿಸಿದ ಎಂದವಳು ಸಂತೋಷಪಟ್ಟಳು.

ಸಿದ್ಧಾರ್ಥನು ಮಾಯವಾದ ಸುದ್ದಿ ಅವಳ ಕಿವಿಗೆ ಮುಟ್ಟಿದ ಕೂಡಲೇ ಅವಳು ಹಕ್ಕಿಯ ಪಂಜರದ ಬಳಿ ಬಂದಳು. ಗೂಡಿನ ಬಾಗಿಲು ತೆರೆದು, ಹಕ್ಕಿ ಯನ್ನು ಹೊರಕ್ಕೆ ತೆಗೆದು ಬಿಟ್ಟುಬಿಟ್ಟಳು. ಹಕ್ಕಿ ಮನೆಯಿಂದ ಹೊರಗೆ ಹಾರಿ ಹೋಯಿತು. ಅದು ಕಣ್ಮರೆಯಾದ ಮೇಲೂ ಕಮಲಾ ಅತ್ತ ನೋ

ಡುತ್ತ ಬಹಳ ಹೊತ್ತಿನ ವರೆಗೆ ನಿಂತುಕೊಂಡಳು. ಅಂದಿನಿಂದ ಅವಳು ಯಾವ ಪ್ರೇಮಿಯನ್ನೂ ಒಳಬರಗೊಡಿಸಲಿಲ್ಲ. ಮನೆಯ ಬಾಗಿಲನ್ನೂ ಹಾಕಿ ಕೊಂಡಳು. ಸ್ವಲ್ಪ ಕಾಲ ಕಳೆದಾಗ, ಕೊನೆಯ ಸಲ ಸಿದ್ಧಾರ್ಥನನ್ನು ಭೇಟಿ ಯಾದುದರ ಫಲವಾಗಿ ತಾನು ಗರ್ಭಿಣಿ ಎಂದು ಕಂಡುಕೊಂಡಳು.

# ೯ ನೆಯ ಅಧ್ಯಾಯ

ಸಿದ್ಧಾರ್ಥ ಆ ನಗರದಿಂದ ಬಹಳ ದೂರ ಹೋದ. ಒಂದು ಕಾಡನ್ನು ಹೊಕ್ಕು ಅಲೆದ. ನಗರಕ್ಕೆ ಮತ್ತೆ ಹಿಂತಿರುಗುವಂತಿಲ್ಲ. ಅನೇಕ ವರುಷಗಳ ಅವನ ಸಂಸಾರಿಕ ಜೀವನವು ಮುಗಿಯಿತು. ಆ ಸವಿ ಒಣಗುವ ವರೆಗೂ ಅದನ್ನು ಅನುಭವಿಸಿಯಾಯ್ತು. ಹಾಡುವ ಹಕ್ಕಿ ಸತ್ತಿದೆ. ಅದರ ಸಾವಿನ ಕನಸನ್ನು ಅವನು ಕಂಡಿದ್ದ. ಅದು ಅವನ ಹೃದಯದ ಹಕ್ಕಿಯೇ. ಸಂಸಾರದ ಆಳ ಕೆಸರಿನಲ್ಲಿ ಅವನ ಕಾಲುಗಳು ಸಿಕ್ಕಿಕೊಂಡವು. ಅವನಿಗೇ ಹೇಯ ವೆನಿಸಿತು. ನೀರನ್ನು ಹೀರಿಕೊಳ್ಳುವ ಪಾಚಿಯಂತೆ ಮೃತ್ಯುವನ್ನು ಎಲ್ಲ ಕಡೆಗಳಿಂದಲೂ ಎಳೆದುಕೊಂಡಿತು ಔದಾಸೀನ್ಯ, ದುಃಖ, ಸಾವೇ ಅವನನ್ನು ಮುಚ್ಚಿವೆ. ಅವನನ್ನು ಆಕರ್ಷಿಸುವ, ಮೋಹಿಸುವ, ಸುಖಪಡಿಸುವ, ಶಾಂತಿ ಯನ್ನೀವ ಯಾವ ವಸ್ತುವೂ ಈ ಪ್ರಪಂಚದಲ್ಲಿಲ್ಲ.

ಹಿಂದಿನದೆಲ್ಲವನ್ನೂ ಮರೆಯಲು, ನಿದ್ದೆಹೋಗಲು, ಹೇಳಹೆಸರಿಲ್ಲ ದಂತೆ ಸತ್ತೂ ಹೋಗಲು ಅವನು ಬಯಸಿದ. ಸಿಡಿಲಾದರೂ ಬಡೆಯುದಿಲ್ಲ ವಲ್ಲ! ಒಂದು ಹುಲಿಯಾದರೂ ಬಂದು ತಿಂದು ಬಿಡುವುದಿಲ್ಲವಲ್ಲ! ಎಲ್ಲ ವನ್ನೂ ಮರೆಯುವ, ನಿದ್ದೆ ಬರಿಸುವ ಮತ್ತು ಅದರಿಂದ ಎಂದೂ ಮತ್ತೆ ಎಚ್ಚರವಾಗದಂತೆ ಮಾಡುವ ಮದ್ಯ, ವಿಷವಾದರೂ ಸಿಕ್ಕಿದ್ದರೆ........!

ಅವನು ಮಾಡದೆ ಬಿಟ್ಟ ಹೊಲೆಗೆಲಸ ಇನ್ನೇನಿದೆ? ಮಾಡದ ಪಾಪ ವೇನಿದೆ? ಕೈಕೊಳ್ಳದ ಹುಚ್ಚುತನವೇನಿದೆ? ಹಾಗಿದ್ದರೂ ಇನ್ನು ಬಾಳಿ ಬದುಕಲು ಶಕ್ಯವೇ? ಇನ್ನೂ ಉಸಿರಾಡಿಸಲು, ಉಣಲು, ನಿದ್ರೆ ಮಾಡಲು

ಸ್ತ್ರೀಯರೊಡನೆ ರಮಿಸಲು ಸಾಧ್ಯವೇ? ಈ ಚಕ್ರ ಇಲ್ಲಿಗೆ ಮುಗಿಯಲಿಲ್ಲವೇ?

ಸಿದ್ಧಾರ್ಥ ಆ ಕಾಡಿನಲ್ಲಿ ಹರಿಯುತ್ತಿರುವ ನದಿಯ ದಂಡೆ ಸೇರಿದ. ಹಿಂದೊಮ್ಮೆ ಗೌತಮನನ್ನು ಕಂಡು ಅವನು ಮರಳಿದಾಗ ಅದೇ ನದಿ ದಾಟಬೇಕಾಗಿತ್ತು. ಒಬ್ಬ ಅಂಬಿಗನು ಅವನನ್ನು ದಾಟಿಸಿದ್ದ. ಸಿದ್ಧಾರ್ಥ ಈಗ ಅವರ ದಂಡೆಯಲ್ಲಿ ಮತ್ತೆ ನಿಂತುಕೊಂಡ. ಹಸಿವೆ, ಆಯಾಸಗಳು ಅವನ ದೇಹವನ್ನು ಬಹಳ ಬಳಲಿಸಿವೆ ಅವನು ಇನ್ನು ಮುಂದೆ ಯಾಕೆ ಹೋಗಬೇಕು? ಹೋಗುವುದಾದರೂ ಎಲ್ಲಿಗೆ? ಯಾವ ಉದ್ದೇಶಕ್ಕಾಗಿ? ಈ ಗೊಂದಲಮಯ ಕನಸಿನಿಂದ ಎಚ್ಚರಗೊಂಡು, ಕುಡಿದ ಹಳೇ ಮದ್ಯವನ್ನು ಕಾರಿ, ದುಃಖಿತ ಜೀವನವನ್ನು ಕೊನೆಗೊಳಿಸುವುದು, ಇದಿಷ್ಟು ಹೊರತು ಬೇರೆ ಯಾವ ಉದ್ದೇಶವೂ ಇಲ್ಲ.

ನದಿಯ ದಡದಲ್ಲಿ ಒಂದು ತೆಂಗಿನ ಮರವಿತ್ತು. ಸಿದ್ಧಾರ್ಥ ಅದಕ್ಕೊರಗಿ, ಒಂದು ಕೈಯಿಂದ ಅದರ ಕಾಂಡವನ್ನು ಸುತ್ತಿಕೊಂಡು ಹರಿವ ಹಸುರು ನೀರನ್ನು ನೋಡುತ್ತ ನಿಂತ. ನದಿಗೆ ಹಾರಿ, ನೀರಿನೊಳಗೆ ಮುಳುಗಿ ಬಿಡಬೇಕೆಂದೂ ಇಚ್ಛಿಸಿದ. ಅವನ ಹೃದಯ ಶೂನ್ಯವಾಗಿದೆ. ಅವನು ದಾರಿಯ ಕೊನೆಯಲ್ಲಿದ್ದಾನೆ. ಅಪಯಶ ಹೊಂದಿದ ತನ್ನ ಈ ಜೀವಸ್ವರೂಪವನ್ನು ವಿನಾಶ ಮಾಡುವುದೊಂದೇ ಈಗ ಮಾಡಬೇಕಾದ ಕೆಲಸ. ಅವನು ದ್ವೇಷಿಸುತ್ತಿರುವ ಈ ದೇಹವನ್ನು ಅಂತ್ಯಗೊಳಿಸಲು ಅವನ ಹಂಬಲ ಈ ನಾಯಿ, ಹುಚ್ಚನನ್ನು ಮೀನುಗಳು ನುಂಗಲಿ! ಈ ಕೊಳೆತ ಶರೀರವನ್ನು ಮೊಸಳೆಗಳು ಹರಿದು ತಿನ್ನಲಿ! ದೆವ್ವಗಳು ಹರಿದು ತುಂಡು ತುಂಡು ಮಾಡಲಿ!

ಮೋರೆ ಸೊಟ್ಟಗೆ ಮಾಡಿಕೊಂಡು ಅವನು ನೀರನ್ನೇ ದಿಟ್ಟಿಸಿದ. ನೀರಿನಲ್ಲಿ ತನ್ನ ಮೋರೆಯ ಪ್ರತಿಬಿಂಬ ಕಂಡು ಉಗುಳಿದ ತೆಂಗಿನ ಮರಕ್ಕೆ ಸುತ್ತಿದ್ದ ಕೈಯನ್ನು ಬಿಡಿಸಿಕೊಂಡು ನದಿಗೆ ಹಾರಲು ಸ್ವಲ್ಪ ಸರಿದ. ಕಣ್ಮುಚ್ಚಿಕೊಂಡು ಮೃತ್ಯುವನ್ನಪ್ಪಿಕೊಳ್ಳಲು ಬಗ್ಗಿದ.

ಆಗ ಅವನ ಆತ್ಮದ ಒಂದು ಮೂಲೆಯಿಂದ ಒಂದು ಧ್ವನಿ ಕೇಳಿಸಿತು. ಅದು ಒಂದೇ ಶಬ್ದ ಒಂದೇ ಅಕ್ಷರ. ಯೋಚಿಸದೆ ತನ್ನಿಂದ ತಾನೇ ಅದನ್ನು ಅಂದ. ಅದು ಸನಾತನವಾದುದು. ಬ್ರಾಹ್ಮಣರ ಜಪದ ಆದಿ ಅಂತ್ಯದಲ್ಲಿ ಅದೇ ಇದೆ. ಅದು ಓಂ. ಅದಕ್ಕೆ ಪರಿಪೂರ್ಣತೆಯ ಅರ್ಥವಿದೆ. ಆ ಓಂಕಾರ

ಶಬ್ದ ಅವನಿಗೆ ಕೇಳಿಸಿದ ಕೂಡಲೇ ನಿದ್ರಾಸಕ್ತವಾಗಿದ್ದ ಅವನ ಆತ್ಮವು ತಕ್ಷಣ ಎಚ್ಚರ ಹೊಂದಿತು. ತನ್ನ ಆತ್ಮಹತ್ಯದ ವಿಚಾರ ಹುಚ್ಚುತನದ್ದೆಂದು ತಿಳಿದುಕೊಂಡ.

ಸಿದ್ಧಾರ್ಥ ಭಯವಿಹ್ವಲನಾದ. ಕೊನೆಗೆ ಅವನು ಇಲ್ಲಿಗೆ ಬಂದಂತಾಯಿತು! ಸಾಯುವಷ್ಟು ಹತಾಶೆ, ಮನೋಗೊಂದಲ! ಈ ಹುಡುಗತನ, ಹಂಬಲಗಳು ಈ ದೇಹವನ್ನು ನಾಶಗೊಳಿಸಿ ಶಾಂತಿ ಪಡೆಯಬೇಕೆನ್ನುವಷ್ಟರ ವರೆಗೆ ಬೆಳೆದುವು! ಆ ಓಂಕಾರವನ್ನು ಆಲಿಸಿದ ತಕ್ಷಣ ಅವನ ಮೇಲೆ ತುಂಬಾ ಪರಿಣಾಮವಾಯಿತು. ಇತ್ತೀಚೆಗೆ ಅವನು ಅನುಭವಿಸಿದ ಯಾತನೆ, ನಿರಾಶೆ, ಹತಾಶೆಗಳೂ ಅಷ್ಟು ಪರಿಣಾಮ ಮಾಡಿರಲಿಕ್ಕಿಲ್ಲ. ಅವನ ಅಸಹಾಯ ಸ್ಥಿತಿ ಹಾಗೂ ಮಾಡಲೆಳಸಿದ ಕೃತ್ಯ ಎಷ್ಟು ಘೋರ!

"ಓಂ" ಎಂದವನು ಮನಸಿನೊಳಗೇ ಉಚ್ಚರಿಸಿದ. ಆಗ ಅವನು ಮರೆತುದುದೆಲ್ಲವನ್ನೂ ಸ್ಮರಿಸಿಕೊಂಡ.

ಆದರೆ ಅದೊಂದು ಕ್ಷಣಮಾತ್ರ! ಮಿಂಚಿನಹಾಗೆ! ದೇಹಾಯಾಸದಿಂದ ಆ ತೆಂಗಿನಮರದ ಬುಡದಲ್ಲೇ ಕುಸಿದು ಬಿದ್ದ. ಓಂಕಾರವನ್ನುತ್ತ ಮರದ ಬೇರುಗಳಮೇಲೆ ತಲೆಯನ್ನಿಟ್ಟು ನಿದ್ದೆಹೋದ.

ಸಿದ್ಧಾರ್ಥನಿಗೆ ಗಾಢನಿದ್ದೆ ಹತ್ತಿತು. ಕನಸೂ ಬೀಳಲಿಲ್ಲ. ದೀರ್ಘ ಕಾಲದಿಂದ ಅವನು ಆ ರೀತಿ ನಿದ್ದೆ ಮಾಡಿರಲಿಲ್ಲ. ಕೆಲವು ತಾಸುಗಳ ಮೇಲೆ ಅವನಿಗೆ ಎಚ್ಚರವಾಯಿತು. ಪ್ರಾಯಶಃ ಹತ್ತು ವರುಷಗಳು ಕಳೆದಿರಬೇಕೆಂದು ಅವನಿಗೆ ತೋಚಿತು. ನೀರಿನ ಜುಳುಜುಳು ಸಪ್ಪಳ ಕೇಳಿಸುತ್ತಿದೆ. ತಾನೆಲ್ಲಿರುವೆ, ಇಲ್ಲಿ ಏಕೆ ಬಂದೆ ಎಂದೂ ಗೊತ್ತಾಗಲಿಲ್ಲ. ಎದ್ದು ಸುತ್ತುಮುತ್ತಲೂ ನೋಡಿದ. ಗಿಡಮರಗಳನ್ನು ಕಂಡು ಅಚ್ಚರಿಪಟ್ಟ. ಆ ಮೇಲೆ ಅವನಿಗೆ ಎಲ್ಲ ನೆನಪಾಯಿತು.

ಅಲ್ಲೇ ಬಹಳ ಹೊತ್ತಿನ ವರೆಗಿರಲು ಅವನು ಬಯಸಿದ. ಗತಜೀವನ ಈಗ ಬಹಳ ದೂರವಿದೆ. ಸಂಪೂರ್ಣ ಮುಸುಕಿನಿಂದ ಮುಚ್ಚಿದೆ. ಮುಸುಕಾಗಿ ಕಾಣುತ್ತದೆ. ಅದಕ್ಕೆ ಮಹತ್ವವೂ ಇಲ್ಲ. ಅವನ ಪೂರ್ವ ಜನ್ಮ ಮುಗಿಯಿತು! ಅದು ಅತ್ಯಂತ ಅಸಹ್ಯವಾಗಿತ್ತು. ಅದನ್ನು ನಿರ್ನಾಮ ಮಾಡಲೂ ಅವನು ಬಯಸಿದ್ದ. ಆದರೆ ಈ ನದಿಯ ಬಳಿ, ತೆಂಗಿನ ಮರದಡಿ,

ಓಂಕಾರವನ್ನುಚ್ಚರಿಸುತ್ತ ಅವನು ಹೊಸಜನ್ಮ ಪಡದ. ಆ ಮೇಲೆ ಅವನಿಗೆ ನಿದ್ದೆ ಬಂದಿತು. ಎಚ್ಚರವಾದ ಮೇಲೆ ಹೊಸ ಮನುಷ್ಯನಂತೆ ಈ ಪ್ರಪಂಚವನ್ನು ನೋಡುತ್ತಿದ್ದಾನೆ. ಪುನಃ ಅವನು ಓಂಕಾರ ಪಠಿಸಿದ. "ನಿದ್ದೆಯಲ್ಲೂ ನಾನು ಅದನ್ನು ಹೇಳುತಿದ್ದೆ ಅದನ್ನೇ ಚಿಂತಿಸುತಿದ್ದೆ. ಆ ನಿದ್ದೆಯೇ ಧ್ಯಾನದಲ್ಲೇ ಅಡಗಿದ್ದೆ" ಎಂದಂದುಕೊಂಡ

ಅದೆಂತಹ ಅಮೃತ ನಿದ್ದೆ ! ಅವನ ದಣುವಾರಿದೆ, ಚೇತನ ತುಂಬಿದೆ, ಪುನರುಜ್ಜೀವನ ಗೊಳಿಸಿದೆ! ಪ್ರಾಯಶಃ ಅವನು ಸತ್ತಿರಬೇಕು, ಪ್ರಾಯಶಃ ಅವನು ನೀರಲ್ಲಿ ಮುಳುಗಿ ಹೋಗಿರಬೇಕು ! ಇದು ಹೊಸ ದೇಹ ಧರಿಸಿದ ಹೊಸಜೀವನ ! ಇಲ್ಲ. ಅವನು ತನ್ನನ್ನು ತಾನೇ ಗುರುತು ಹಿಡಿದ ತನ್ನ ಕೈ, ಕಾಲು, ಅಂಗಾಂಗಳನ್ನು ನೋಡಿಕೊಂಡ. ಮಲಗಿಕೊಂಡ ಸ್ಥಳವನ್ನು ನೀರಿಕ್ಷಿಸಿದ. ಇಲ್ಲ ಅವನೇ! ಸ್ವಬುದ್ಧಿಯಿಂದ ನಡೆವ, ಪ್ರತ್ಯೇಕ ದಾರಿ ಅರಿಸಿಕೊಳ್ಳುವ ಸಿದ್ಧಾರ್ಥ ! ಆದರೆ ಈ ಸಿದ್ಧಾರ್ಥ ಸ್ವಲ್ಪ ಬದಲಾಗಿದ್ದಾನೆ. ಪುನರುಜ್ಜೀವನ ಹೊಂದಿದ್ದಾನೆ. ಪುನಃ ಕುತೂಹಲದಿಂದಲೂ ಸಂತೋಷದಿಂದಲೂ ಇದ್ದಾನೆ!

ಸಿದ್ಧಾರ್ಥ ಎದ್ದು ನೋಡಿದ. ಸ್ವಲ್ಪ ದೂರದಲ್ಲಿ ಅವನ ಇದಿರಿಗೆ, ತಲೆ ಬೋಳಿಸಿಕೊಂಡು ನಿಲುವಂಗಿ ಧರಿಸಿದ ಒದ್ಧ ಭಿಕ್ಷು ಧ್ಯಾನಮಗ್ನನಾಗಿ ಕುಳಿತಿದ್ದ. ಅವನು ಸಿದ್ಧಾರ್ಥನ ಮಿತ್ರ ಗೋವಿಂದ. ಗೋವಿಂದನಿಗೂ ಈಗವಯಸ್ಸಾಗಿದೆ. ಆದರೆ ಕುತೂಹಲ, ಚಿಂತೆ, ವಿಧೇಯತೆ ಮೊದಲಾದ ಹಿಂದಿನ ಗುಣಶೀಲಗಳು ಇನ್ನೂ ಮೋರೆಯಲ್ಲಿ ಮನೆ ಮಾಡಿವೆ. ಸಿದ್ಧಾರ್ಥ ತನ್ನನ್ನು ಅವನು ನೋಡುತ್ತಿರುವುದನ್ನೂ ಕಂಡ. ಗೋವಿಂದನೂ ಕಣ್ಣುಗಳನ್ನೆತ್ತಿದ ಗೋವಿಂದನಿಗೆ ತನ್ನ ಗುರುತು ಹತ್ತಲಿಲ್ಲವೆಂದು ಸಿದ್ಧಾರ್ಥ ಅರಿತ. ಅವನು ನಿದ್ದೆಯಿಂದ ಎಚ್ಚರಗೊಂಡುದುದರಿಂದ ಗೋವಿಂದನಿಗೆ ಸಂತೋಷವಾಯಿತು. ಅವನು ಎಚ್ಚರವಾಗುವುದನ್ನೇ ನಿರೀಕ್ಷಿಸುತ್ತ ಗೋವಿಂದ ಬಹಳ ಹೊತ್ತಿನಿಂದ ಅಲ್ಲೇ ಕುಳಿತಿದ್ದ.

ಸಿದ್ಧಾರ್ಥ ಮಾತನಾಡಿದ: "ನನಗೆ ನಿದ್ದೆ ಬಂದಿತ್ತು. ನೀನು ಇಲ್ಲಿ ಹೇಗೆ ಬಂದೆ ?"

ಗೋವಿಂದ ಉತ್ತರವಿತ್ತ: "ನಿನಗೆ ನಿದ್ದೆ ಬಂದಿತ್ತು. ಇಂತಹ ಸ್ಥಳಗಳಲ್ಲಿ ನಿದ್ದೆ ಮಾಡುವುದು ಸರಿಯಲ್ಲ. ಹತ್ತಿರದ ಕಾಡಿನಿಂದ ಪಶುಗಳೂ ಹಾವುಗಳೂ ಅತ್ತಿತ್ತ ಸಂಚರಿಸುತ್ತವೆ. ನಾನು, ಮಹಾತ್ಮನೂ ಶಾಕ್ಯಮುನಿಯೂ ಆಗಿರುವ ಗೌತಮಬುದ್ಧನ ಅನುಯಾಯಿ. ನನ್ನ ಸಹೋದರರೊಂದಿಗೆ ಯಾತ್ರೆಗೆ ಹೊರಟಿದ್ದೆ. ಇಂತಹ ಗಂಡಾಂತರ ಸ್ಥಳದಲ್ಲಿ ನೀನು ಮಲಗಿರುವದನ್ನು ನೋಡಿದೆ. ಎಚ್ಚರಗೊಳಿಸಲು ಯತ್ನಿಸಿದೆ. ಆದರೆ ನೀನು ಗಾಢನಿದ್ರಾಸಕ್ತನಾಗುವದನ್ನು ಕಂಡು, ನನ್ನೊಂದಿಗಿದ್ದವರನ್ನೆಲ್ಲ ಬಿಟ್ಟು ನಿನ್ನ ಬಳಿ ಕುಳಿತೆ. ಆದರೆ ನಿನ್ನನ್ನು ಕಾಯುತ್ತ ಕುಳಿತ ನಾನೇ ನಿದ್ದೆ ಹೋದೆ. ದೇಹಾಯಾಸ ನನ್ನನ್ನೇ ಜಯಿಸಿತು. ಸರಿಯಾಗಿ ನಾನು ಕಾವಲು ಮಾಡಲಿಲ್ಲ. ಈಗ ನೀನು ಎಚ್ಚರ ಹೊಂದಿರುವುದರಿಂದ ನಾನು ಹೋಗಬೇಕಾಗಿದೆ.''

"ಸನ್ಯಾಸಿಯೇ! ನಿನಗೆ ಕೃತಜ್ಞ. ಆ ಮಹಾತ್ಮನ ಅನುಯಾಯಿಗಳು ದಯಾವಂತರು. ನೀನೀಗ ಹೋಗಬಹುದು"

"ಹೋಗುತ್ತೇನೆ. ನಿನಗೆ ಶುಭವಾಗಲಿ!"

"ಅಭಿವಂದನೆಗಳು!"

ಗೋವಿಂದ ಶಿರಬಾಗಿ "ನಮಸ್ಕಾರ" ಎಂದ

ಸಿದ್ಧಾರ್ಥ "ನಮಸ್ಕಾರ, ಗೋವಿಂದಾ!" ಎಂದು ನುಡಿದ.

ಸನ್ಯಾಸಿ ಬೆರಗಾದ.

"ಸ್ವಾಮಿ, ನಿನಗೆ ನನ್ನ ಹೆಸರು ಹೇಗೆ ಗೊತ್ತು?"

ಸಿದ್ಧಾರ್ಥ ನಕ್ಕ.

ಆ ಮೇಲೆ ಹೇಳಿದ: "ಗೋವಿಂದಾ! ಬಾಲ್ಯದಿಂದಲೂ ನಿನ್ನನ್ನು ಬಲ್ಲೆ. ನಿನ್ನ ಮನೆಯನ್ನು ಬಲ್ಲೆ. ಬ್ರಾಹ್ಮಣರ ಶಾಲೆಯಲ್ಲಿ ಕಂಡೆ. ಯಾಗಯಜ್ಞಗಳ ಕಾಲದಲ್ಲಿದ್ದೆ. ಸನ್ಯಾಸಿಗಳೊಂದಿಗೆ ನಾವು ಒಟ್ಟಿಗೆ ಸಂಚರಿಸಿದೆವು. ಮುಂದೆ ಜೇತವನದಲ್ಲಿ ನೀನು ಬುದ್ಧನ ಶಿಷ್ಯನಾದೆ."

"ಸಿದ್ಧಾರ್ಥ''! ಎಂದು ಗೋವಿಂದ ಕೂಗಿ ನುಡಿದ: "ಈಗ ನನಗೆ ನಿನ್ನ ಗುರುತು ಹತ್ತಿತು. ಮೊದಲು ಆಗದಿದ್ದುದಕ್ಕೂ ಕಾರಣ ತಿಳಿಯಿತು. ಶುಭಮಸ್ತು! ನಿನ್ನನ್ನು ನೋಡಿ ಬಹಳ ಸಂತೋಷವಾಯಿತು."

"ನಿನ್ನನ್ನು ಮತ್ತೆ ಕಂಡು ನನಗೂ ಸಂತೋಷವಾಗುತ್ತದೆ. ನಾನು ನಿದ್ರಾಸಕ್ತನಾದಾಗ ನೀನು ರಕ್ಷಿಸಿದೆ. ಕಾವಲು ಮಾಡುವ ಅವಶ್ಯಕತೆಯಿರಲಿಲ್ಲ. ಆದರೂ ಅದಕ್ಕಾಗಿ ನಿನಗೆ ಧನ್ಯವಾದಗಳು. ಮಿತ್ರಾ, ಈಗ ಯಾವ ಕಡೆ ಪಯಣ?''

''ನಾನೆಲ್ಲಿಯೂ ಹೋಗಲು ಹೊರಟಿಲ್ಲ. ಭಿಕ್ಷುಗಳಾದ ನಾವು ಯಾವಾಗಲೂ ಸಂಚಾರ ಮಾಡುತ್ತೇವೆ. ಮಳೆಗಾಲದಲ್ಲಿ ಮಾತ್ರ ಎಲ್ಲಿಯೂ ಹೋಗುವುದಿಲ್ಲ. ಯಾವಾಗಲೂ ನಾವು ಒಂದು ಸ್ಥಳದಿಂದ ಮತ್ತೊಂದಕ್ಕೆ ಪ್ರಯಾಣ ಮಾಡುತ್ತೇವೆ. ಬೌದ್ಧ ನೀತಿಯಂತೆ ನಡೆಯುತ್ತೇವೆ ಬೋಧಿಸತ್ವ ಬೋಧಿಸುತ್ತೇವೆ. ಭಿಕ್ಷೆ ಎತ್ತಿ ಜೀವಿಸುತ್ತ ಮತ್ತೊಂದೆಡೆ ತೆರಳುತ್ತೇವೆ. ಯಾವಾಗಲೂ ಇದೇ ರೀತಿ. ಆದರೆ ನೀನೆಲ್ಲಿ ಹೋಗುತ್ತಾ ಇದ್ದೀಯಾ?"

"ಮಿತ್ರಾ, ನಿನ್ನ ಹಾಗೆಯೇ ನಾನು ಕೂಡಾ. ನಾನೂ ಎಲ್ಲಿಗೂ ಹೊರಟಿಲ್ಲ. ನಾನು ಯಾತ್ರೆಗೆ ಹೊರಟಿದ್ದೇನೆ."

"ಯಾತ್ರೆಗೆ ಹೊರಟಿರುವೆನೆಂದು ನೀನು ಹೇಳಿದೆಯಲ್ಲ! ನಾನು ನಂಬುತ್ತೇನೆ ಆದರೆ ನೀನು ಯಾತ್ರಿಕನಂತಿಲ್ಲ. ಶ್ರೀಮಂತರ ಬಟ್ಟೆಬರೆಗಳನ್ನು ಧರಿಸಿದ್ದೀಯಾ! ಸೊಗಸುಗಾರನ ಪಾದರಕ್ಷೆಗಳನ್ನು ಹಾಕಿಕೊಂಡಿದ್ದೀಯಾ! ಸುವಾಸನೆಯ ಎಣ್ಣೆಯನ್ನು ತಲೆಗೆ ಪೂಸಿಕೊಂಡಿರುವೆ! ಅದು ಯಾತ್ರಿಕ ಅಥವಾ ಸನ್ಯಾಸಿಯ ತಲೆಗೂದಲಿನಂತಿಲ್ಲ.''

"ಮಿತ್ರಾ, ನೀನು ನುಡಿದುದು ನಿಜ. ನಿನ್ನ ತೀಕ್ಷ್ಣ ಕಣ್ಣುಗಳು ಕಾಣದ ವಸ್ತುವಿಲ್ಲ. ಆದರೆ ನಾನು ಸನ್ಯಾಸಿಯೆಂದು ಹೇಳಲಿಲ್ಲವಲ್ಲ. ನಾನು ಯಾತ್ರೆಗೆ ಹೊರಟಿರುವೆನೆಂದೆ. ಅದು ಸತ್ಯ."

"ನೀನು ಯಾತ್ರೆಗೆ ಹೊರಟಿದ್ದೀಯಾ! ಆದರೆ ಇಂತಹ ವಸ್ತ್ರ, ಪಾದರಕ್ಷೆ, ತಲೆಗೂದಲುಗಳಿಂದ ಯಾರು ಯಾತ್ರೆ ಹೊರಡುತ್ತಾರೆ? ನಾನು ಅನೇಕ ವರುಷಗಳಿಂದಲೂ ದೇಶ ಸಂಚಾರ ಮಾಡುತಿದ್ದೇನೆ. ಆದರೆ ಇಂತಹ ಯಾತ್ರಿಕನನ್ನು ಎಲ್ಲಿಯೂ ಭೆಟ್ಟಿಯಾಗಿಲ್ಲ!''

"ಗೋವಿಂದಾ! ನಿನ್ನ ಮಾತನ್ನು ನಂಬುವೆ. ಆದರೆ ಅಂತಹ ಯಾತ್ರಿಕನೊಬ್ಬ ಇಂದು ನಿನಗೆ ಭೆಟ್ಟಿಯಾದನೆಂದು ತಿಳಿದುಕೋ. ಈ ದೃಶ್ಯ

ಪ್ರಪಂಚ ಅಸ್ಥಿರ. ನಮ್ಮ ಬಟ್ಟೆಬರೆಗಳ ಹಾಗೂ ತಲೆಗೂದಲಿನ ಸ್ವರೂಪವೂ ಅಸ್ಥಿರ. ನಮ್ಮ ದೇಹಗಳೂ ಕ್ಷಣಿಕ. ನೀನು ಹೇಳುವುದು ನಿಜ. ನಾನು ಶ್ರೀಮಂತರ ಉಡುಗೆ ತೊಡುಗೆ ಧರಿಸಿದ್ದೇನೆ. ಏಕೆಂದರೆ ನಾನು ಶ್ರೀಮಂತನಾಗಿದ್ದೆ."

"ಈಗ? ಈಗ ಏನಾಗಿದ್ದಿ?"

"ನನಗೆ ಗೊತ್ತಿಲ್ಲ. ನಿನ್ನಂತೆ ನಾನೂ ಅಜ್ಞಾನಿ ನಾನು ಶ್ರೀಮಂತನಾಗಿದ್ದೆ. ಈಗ ಇಲ್ಲ. ನಾಳೆ ಏನಾಗುತ್ತೇನೋ ನನಗೆ ಗೊತ್ತಿಲ್ಲ"

"ಐಶ್ವರ್ಯವನ್ನೆಲ್ಲ ಕಳೆದುಕೊಂಡೆಯಾ?"

"ಕಳೆದುಕೊಂಡೆ ಅಥವಾ, ಅದೇ ನನ್ನ ಕೈ ಬಿಟ್ಟಿತೋ ಹೇಳಲಾರೆ. ಈ ರೂಪ ಚಕ್ರ ಗರಗರನೇ ತಿರುಗುತ್ತಿದೆ. ಬ್ರಾಹ್ಮಣನಾದ ಸಿದ್ಧಾರ್ಥ ಎಲ್ಲಿ? ಯತಿಯಾದ ಸಿದ್ಧಾರ್ಥ ಎಲ್ಲಿ? ಶ್ರೀಮಂತನಾದ ಸಿದ್ಧಾರ್ಥ ಎಲ್ಲಿ? ಅಸ್ಥಿರವಾದುದೆಲ್ಲ ಬದಲಾಗುತ್ತ ಹೋಗುತ್ತದೆ. ನಿನಗದು ಗೊತ್ತಿದೆಯಲ್ಲ!"

ಗೋವಿಂದ ಬಹಳ ಹೊತ್ತಿನ ವರೆಗೆ ತನ್ನ ಹಿಂದಿನ ಮಿತ್ರನನ್ನು ಸಂಶಯ ದೃಷ್ಟಿಯಿಂದಲೇ ದಿಟ್ಟಿಸಿದ. ಆ ಮೇಲೆ ದೊಡ್ಡವರಿಗೆ ವಂದಿಸುವಂತೆ ನಮಸ್ಕರಿಸಿ, ತನ್ನ ದಾರಿ ಹಿಡಿದು ಹೋದ.

ಸಿದ್ಧಾರ್ಥ ಮುಗುಳು ನಗುತ್ತ ಅವನು ಹೋಗುವುದನ್ನೇ ನೋಡಿದ. ತನ್ನ ಈ ಮಿತ್ರನ ಮೇಲೆ ಅವನಿಗಿನ್ನೂ ಪ್ರೀತಿ. ಅವನು ನಿದ್ದೆಯಿಂದೆದ್ದ ಮೇಲೆ, ಓಂಕಾರದಲ್ಲಿ ಪ್ರವೇಶಿಸಿದ ಮೇಲೆ, ಆ ಶುಭ ಗಳಿಗೆಯಲ್ಲಿ ಯಾವುದಾದರೊಂದನ್ನು ಪ್ರೇಮಿಸದೆ ಹೇಗಿರಲಾದೀತು? ಓಂಕಾರವನ್ನುಚ್ಚರಿಸುತ್ತ ನಿದ್ದೆ ಹೋದವನ ಮೇಲೆ ಅಂತಹ ಒಂದು ಇಂದ್ರಜಾಲ ವ್ಯಾಪಿಸಿದೆ. ಎಲ್ಲದರ ಮೇಲೂ ಅವನಿಗೆ ಪ್ರೇಮ. ತಾನು ಕಂಡುದುದೆಲ್ಲದರ ಮೇಲೂ ಪ್ರೀತಿ. ಹಿಂದೆ ಯಾರನ್ನೂ ಅಥವಾ ಯಾವುದನ್ನೂ ಪ್ರೀತಿಸಲಾಗುತ್ತಿರಲಿಲ್ಲ. ಪ್ರಾಯಶಃ ಅದೇ ಕಾರಣದಿಂದ ಬೇನೆ ಬಿದ್ದಿದ್ದನೋ ಏನೋ!

ಗೋವಿಂದ ಕಣ್ಮರೆಯಾಗುವ ವರೆಗೂ ಸಿದ್ಧಾರ್ಥ ನೋಡಿದ. ನಿದ್ದೆಯಿಂದ ಅವನಿಗೀಗ ಬಲ ಬಂದಿದೆ. ಈಗ ಹಸಿವೂ ಆಗಿದೆ. ಎರಡು ದಿವಸಗಳಿಂದ ಅವನೇನೂ ತಿಂದಿಲ್ಲ. ಹಸಿವೆಯನ್ನು ನಿಗ್ರಹಿಸುವ ಕಾಲವೂ ಕಳೆದಿದೆ. ತಳಮಳವಾದರೂ ಆ ಕಾಲವನ್ನು ಅವನು ನಗುತ್ತ ನೆನಸಿಕೊಂಡ.

ಚಿಂತನೆ, ಸ್ಥೈರಣೆ, ನಿರಾಹಾರಗಳೆಂಬ ತ್ರಿವಿಧ ಕಲೆಗಳು ತನಗೆ ತಿಳಿದಿವೆ ಯೆಂಬ ಕಮಲೆಯ ಮುಂದೆ ತಾನು ಜಂಭ ಕೊಚ್ಚಿಕೊಂಡುದುದನ್ನು ಸ್ಮರಿಸಿಕೊಂಡ. ಇವು ಅವನ ಐಶ್ವರ್ಯ, ಅಧಿಕಾರ, ಶಕ್ತಿ, ಊರುಗೋಲು ಗಳಾಗಿದ್ದುವು.

ಅವನು ತನ್ನ ಕೌಮಾರಾವಸ್ಥೆಯಲ್ಲಿ ಈ ಮೂರು ಕಲೆಗಳನ್ನು ಶ್ರದ್ಧೆ ಯಿಂದ ಕಲಿತಿದ್ದ. ಬೇರೇನನ್ನೂ ಕಲಿತಿರಲಿಲ್ಲ. ಈಗ ಆ ಮೂರೂ ನಷ್ಟವಾ ಗಿವೆ. ಮೂರರಲ್ಲಿ ಒಂದೂ ಅವನ ವಶವಿಲ್ಲ. ಹೇಯ ವಸ್ತುಗಳಿಗಾಗಿ, ಪಂಚೇಂದ್ರಿಯಗಳ ಸುಖಕ್ಕಾಗಿ, ದೊಡ್ಡವರ ಮತ್ತು ಶ್ರೀಮಂತರ ಬಾಳುವೆ ಗಾಗಿ, ಅವೆಲ್ಲವನ್ನೂ ಬಲಿಗೊಟ್ಟಿದ್ದ. ಅವನು ವಿಚಿತ್ರ ದಾರಿಯಲ್ಲಿ ನಡೆದ. ಈಗ ತಾನೂ ಒಬ್ಬ ಸಾಮಾನ್ಯ ಮನುಷ್ಯನೆಂದು ಅವನಿಗೆ ಭಾಸವಾಗಿದೆ.

ಸಿದ್ಧಾರ್ಥ ತನ್ನ ಪರಿಸ್ಥಿತಿಯನ್ನು ಪರಿಭಾವಿಸಿದ. ಆಲೋಚಿಸುವುದೇ ಈಗ ಕಷ್ಟ. ಮನೋಬಲವೂ ಕುಂದಿದೆ. ಆದರೂ ಬಲಾತ್ಕಾರದಿಂದ ಯೋಚಿಸಿದ.

ಈಗ ಈ ಎಲ್ಲ ಅಸ್ಥಿರ ವಸ್ತುಗಳು ನನ್ನ ಕೈಯಿಂದ ಜಾರಿವೆ. ಬಾಲ ಕನಾಗಿದ್ದಾಗ ಹೇಗಿದ್ದೆನೋ ಹಾಗೇ ಇದ್ದೇನೆ. ನನ್ನದೆನ್ನುವುದು ಏನೂ ಇಲ್ಲ. ನನಗೇನೂ ಗೊತ್ತಿಲ್ಲ. ನನ್ನ ವಶ ಏನೂ ಇಲ್ಲ. ನಾನು ಏನನ್ನೂ ಕಲಿಯಲಿಲ್ಲ. ಎಷ್ಟು ವಿಲಕ್ಷಣ ! ಯೌವನವಿಲ್ಲದ, ತಲೆ ನರೆತಿರುವ, ಬಲ ಗುಂದಿರುವ ಈ ಸಮಯದಲ್ಲಿ ಪುನಃ ಬಾಲಕನಂತೆ ಆರಂಭಿಸಬೇಕಾಗಿದೆ. ಅದನ್ನು ನೆನಸಿ ಪುನಃ ನಗತೊಡಗಿದ. ಅವನ ಅದೃಷ್ಟ ವಿಚಿತ್ರ ! ಅವನು ಹಿಂದೆ ಹೆಜ್ಜೆ ಹಾಕುತಿದ್ದಾನೆ. ಆದರೆ ಅದಕ್ಕಾಗಿ ಅವನು ದುಃಖಿಸಲಿಲ್ಲ. ನಗಲು; ತನ್ನ ಬಗ್ಗೆ ನಗಲು ಹಾಗೂ ಈ ವಿಚಿತ್ರ ಹುಚ್ಚು ಜಗತ್ತಿನ ಬಗ್ಗೆ ನಗಲು ಅವನು ಬಯಸಿದ.

ನನ್ನ ಜೀವನ ಎಷ್ಟು ವಿಲಕ್ಷಣ! ವಿಚಿತ್ರವಾದ ದಾರಿ ನನ್ನದು. ಬಾಲ ಕನಾಗಿದ್ದಾಗ ಯಾಗಯಜ್ಞಗಳಲ್ಲಿ ಮಗ್ನನಾಗಿದ್ದೆ. ಕೌಮಾರಾವಸ್ಥೆಯಲ್ಲಿ ಧ್ಯಾನಯೋಗಗಳ ಯತಿತ್ವದಲ್ಲಿದ್ದೆ. ಬ್ರಹ್ಮಜ್ಞಾನದ ಶೋಧನೆಗೆ ಆರಂಭಿ ಸಿದೆ. ಶಾಶ್ವತವಾದುದು ಆತ್ಮವೆಂದು ತಿಳಿದೆ. ಯೌವನದಲ್ಲಿ ಪಾಪದ ಪ್ರಾಯಶ್ಚಿತ್ತ ಮಾರ್ಗವನ್ನವಲಂಬಿಸಿ ಕಾಡಿನಲ್ಲಿದ್ದು ಚಳಿಗಾಳಿ ಮಳೆಗಳಿಗೆ

ಮೈಯೊಡ್ಡಿದೆ. ನಿರಾಹಾರ ವ್ರತ ಹಿಡಿದೆ. ದೇಹವನ್ನು ಜಯಿಸಲೆತ್ನಿಸಿದೆ. ಆಗ ಬುದ್ಧನ ತತ್ವವು ನನ್ನನ್ನಾಕರ್ಷಿಸಿತು. ಜ್ಞಾನ, ವಿಶ್ವಪ್ರೇಮಗಳೆಲ್ಲ ರಕುತವಂತೆ ನನ್ನ ದೇಹವನ್ನೆಲ್ಲ ವ್ಯಾಪಿಸಿದಂತೆ ತೋರಿತು. ಆದರೆ ಕೊನೆಗೆ ಆ ಜ್ಞಾನವನ್ನೂ ನಾನು ತ್ಯಜಿಸಿದೆ.

ಅಲ್ಲಿಂದ ತೆರಳಿ ಕಮಲೆಯಿಂದ ಪ್ರೇಮಸುಖಗಳನ್ನು ಕಲಿತೆ. ಕಾಮ ಸ್ವಾಮಿ ಲೇವಾದೇವಿ ಹೇಳಿಕೊಟ್ಟ. ಹಣ ಸಂಪಾದಿಸಿದೆ. ಹಾಳುಮಾಡಿದೆ. ಮೃಷ್ಟಾನ್ನ ಭೋಜನದ ಸವಿಕಂಡೆ. ಪಂಚೇಂದ್ರಿಯಗಳನ್ನು ಉದ್ರೇಕ ಗೊಳಿಸಿದೆ. ನನ್ನ ಬುದ್ಧಿ, ಆಲೋಚನಾಶಕ್ತಿಗಳನ್ನು ಕಳೆದುಕೊಳ್ಳಲು ಆ ರೀತಿ ನಾನು ಅಷ್ಟು ವರುಷಗಳನ್ನು ಕಳೆಯ ಬೇಕಾಯಿತು.

ನಾನು ಅನೇಕ ಸಲ ಅಡ್ಡ ಹಾದಿ ಹಿಡಿದರೂ ಪುರುಷನಾಗಿದ್ದವನು ಮಗು ಹಾಗೂ ಆಲೋಚನಾಪರ ಮನುಷ್ಯನು ಸಾಮಾನ್ಯ ಮನುಷ್ಯನಾಗಿ ರುವುದು ನಿಜವಲ್ಲವೇ ? ಅದೇನಿದ್ದರೂ ಈ ದಾರಿ ಚೆನ್ನಾಗಿಯೇ ಇದೆ. ಹೃದಯದ ಹಕ್ಕಿ ಇನ್ನೂ ಸತ್ತಿಲ್ಲ. ಆದರೆ ಅದೆಂತಹ ದಾರಿ ! ಎಷ್ಟು ಮೂರ್ಖತನ, ದುರ್ವ್ಯಸನ, ಅಸತ್ಯತನ, ಭ್ರಮನಿರಸನಗಳನ್ನೂ ಅನುಭವಿಸ ಬೇಕಾಯ್ತು ! ಪುನಃ ಮಗುವಾಗಿ ಹೊಸ ಹೆಜ್ಜೆಗಳನ್ನಿಡಲು ಈ ಎಲ್ಲ ದುಃಖಗಳನ್ನು ಎಷ್ಟು ಸಹಿಸಬೇಕಾಯಿತು !

ಆದರೆ ಹಾಗಾದುದೇ ಸರಿ. ನನ್ನ ಕಣ್ಮನಗಳು ಹಾಗೆ ಜಯಘೋಷಿ ಸುತ್ತವೆ. ನಿರಾಶೆಯನ್ನು ನಾನು ಅನುಭವಿಸಬೇಕಾಗಿತ್ತು. ಆತ್ಮಹತ್ಯೆ ಮಾಡಿಕೊಳ್ಳುವಷ್ಟರವರೆಗಿನ ಮಾನಸಿಕ ಹತಾಶೆಯಲ್ಲಿ ನಾನು ಮುಳುಗ ಬೇಕಾಗಿತ್ತು. ಏಕೆಂದರೆ ದಯೆಗೆ ಪಾತ್ರನಾಗಲು, ಮತ್ತೆ ಓಂಕಾರವನ್ನಾ ಲಿಸಲು, ಮತ್ತೆ ಗಾಢನಿದ್ದೆ ಹೋಗಲು ಹಾಗೂ ಪುನಃ ನವಚೈತನ್ಯದಿಂದ ಎಚ್ಚರಹೊಂದಲು ಅದು ಅಗತ್ಯವಿತ್ತು. ನನ್ನಲ್ಲಿ ಆತ್ಮವನ್ನು ಕಂಡು ಕೊಳ್ಳಲು ನಾನು ಹುಚ್ಚನಾಗಬೇಕಾಗಿತ್ತು. ಇನ್ನೂ ನನ್ನ ದಾರಿ ನನ್ನನ್ನೆಲ್ಲೆಲ್ಲಿ ಕರೆದೊಯ್ಯುವುದೋ ಏನೋ ? ಈ ದಾರಿ ಸುಗಮವಿಲ್ಲ. ಇದು ನಾಗಮುರಿ ಯಂತಿದೆ. ಅಥವಾ ಸುಳಿಚಕ್ರವಾಗಿರಲೂ ಸಾಕು. ಅದೇನಿದ್ದರೂ ಅದು ಹೋದ ದಾರಿಯನ್ನೇ ನಾನು ಅನುಸರಿಸುವೆ.

ತನ್ನ ಹೃದಯದಲ್ಲಿ ಸಂತೋಷ ಉಕ್ಕೇರುತ್ತಿರುವುದನ್ನು

ಸಿದ್ಧಾರ್ಥ ಚರಿತ.

ಇದೆಲ್ಲಿಂದ ಬಂತು ? ಈ ಸಂತೋಷಕ್ಕೆ ಕಾರಣವೇನು ? ನನ್ನ ದೀರ್ಘ ನಿದ್ದೆಯ ಪರಿಣಾಮವೇ ? ಅಥವಾ ನಾನು ಉಚ್ಚರಿಸಿದ ಓಂಕಾರ ಶಕ್ತಿಯೇ ? ಅಥವಾ ನಾನು ಓಡಿ ಬಂದುದರಿಂದಲೇ ? ನಾನು ಮತ್ತೆ ಸ್ವತಂತ್ರನಾದುದರಿಂದಲೇ ?

ಈ ರೀತಿ ಪಲಾಯನ ಮಾಡಿದುದು ಎಷ್ಟು ಒಳ್ಳೆಯದಾಯಿತು ! ಇದು ವಿಮೋಚನೆ ! ನಾನು ಪಾರಾಗಿ ಬಂದ ಸ್ಥಳದಲ್ಲಿ ಯಾವಾಗಲೂ ಪರಿಮಳ ತೈಲ, ಸುಖ ಭೋಜನ, ಆಲಸ್ಯ, ಉದ್ರೇಕಗಳ ವಾತಾವರಣ ತುಂಬಿತ್ತು. ಆ ಐಶ್ವರ್ಯ ಜೀವನವನ್ನು ನಾನು ಎಷ್ಟು ದ್ವೇಷಿಸುತಿದ್ದೆ ! ಆ ಭೀಕರ ಜಗತ್ತಿನಲ್ಲಿ ಅಷ್ಟು ದೀರ್ಘ ಕಾಲದ ವರೆಗೆ ಇದ್ದುದಕ್ಕಾಗಿ ನನ್ನನ್ನು ನಾನು ಎಷ್ಟು ಹಳಿದುಕೊಂಡೆ ! ನನ್ನನ್ನು ನಾನು ಎಷ್ಟು ದ್ವೇಷಿಸುತಿದ್ದೆ ! ಎಷ್ಟು ವಿಷ ಕುಡಿಯುತಿದ್ದೆ! ಎಷ್ಟು ಹಿಂಸೆ ಕೊಡುತಿದ್ದೆ ದೇಹಕ್ಕೆ! ಅವೆಲ್ಲವುಗಳಿಂದ ನಾನು ಕುರೂಪಿ ಹಾಗೂ ವಯೋವೃದ್ಧನಾಗುವಂತೆ ಮಾಡಿಕೊಂಡೆ!

ಸಿದ್ಧಾರ್ಥ ಬುದ್ಧಿವಂತನೆಂದು ನಾನು ಇನ್ನು ಎಂದೆಂದೂ ಹೇಳಲಾರೆ. ಆದರೆ ನಾನು ಸತ್ಕಾರ್ಯವನ್ನು ಮಾಡಿರುವೆ. ಅದರಿಂದ ನನಗೀಗ ಸಂತೋಷವೂ ಆಗುತ್ತಿದೆ. ನಾನು ಆತ್ಮದ್ವೇಷ, ಶೂನ್ಯಜೀವನವನ್ನು ಕೊನೆಗೊಳಿಸಿದ್ದೇನೆ. ಸಿದ್ಧಾರ್ಥ ! ನಾನು ನಿನ್ನನ್ನು ಕೊಂಡಾಡುತ್ತೇನೆ. ಏಕೆಂದರೆ, ಅಷ್ಟು ವರುಷಗಳ ಹುಚ್ಚುತನವೇನೇ ಇರಲಿ ಮತ್ತೆ ಸದ್ವಿಚಾರ ಹೊಳೆಯಿತಲ್ಲ! ನಿನ್ನ ಹೃದಯದ ಹಕ್ಕಿ ಮತ್ತೆ ಹಾಡಿತಲ್ಲ! ನೀನು ಅದನ್ನು ಪುನಃ ಆಲಿಸಿದೆಯಲ್ಲ !

ಆ ರೀತಿ ಸಿದ್ಧಾರ್ಥ ತನ್ನನ್ನು ಹೊಗಳಿಕೊಂಡ. ತನ್ನ ಮೇಲೆ ಅವನಿಗೆ ಸಂತೋಷವೂ ಆಯಿತು. ಹಸಿವೆಯಿಂದ ಗೊಳಗುಟ್ಟತೊಡಗಿದ ತನ್ನ ಹೊಟ್ಟೆಯನ್ನೂ ದಿಟ್ಟಿಸಿದ. ಹತಾಶೆ ಮತ್ತು ಸಾವಿನ ಸ್ಥಿತಿಯ ವರೆಗೂ ತಾನು ನುಂಗಿದ್ದ ದುಃಖದ ಒಂದು ಭಾಗವನ್ನೂ ಯಾತನೆಯ ಒಂದಂಶವನ್ನೂ ಈಗ ಕಾರಿಕೊಂಡಿದ್ದೇನೆಂದು ಅವನು ಸಂತುಷ್ಟನಾದ...

ಆದುದೆಲ್ಲ ಒಳ್ಳೆಯದಕ್ಕೇ ಆಯಿತು. ಈ ಹತಾಶೆ, ಆತ್ಮಹತ್ಯೆ ಮಾಡಿಕೊಳ್ಳುವಂತಹ ಮನೋಕ್ಷೋಭೆಗಳುಂಟಾಗದೇ ಇರುತಿದ್ದರೆ ಅವನಿನ್ನೂ

ಕಾಮಸ್ವಾಮಿಯಲ್ಲೇ ಇರುತಿದ್ದ. ಹಣ ಸಂಪಾದಿಸುತ್ತ ಆತ್ಮವನ್ನು ಅಲಕ್ಷಿಸಿ, ಐಹಿಕಸುಖದಲ್ಲೇ ಇನ್ನೂ ಹೆಚ್ಚುಕಾಲ ಕಳೆಯುತಿದ್ದ. ಆ ನಿರಾಶೆಯ ಗಳಿಗೆ ಪರಿಸ್ಥಿತಿಯನ್ನು ಮಾರ್ಪಡಿಸಿತು ಆದರೆ ಅವನು ಅನುಭವಿಸಿದ ಆ ಹತಾಶೆ ಸಂಪೂರ್ಣ ಅವನನ್ನು ಮುಳುಗಿಸಿ ಬಿಡಲಿಲ್ಲ. ಅವನ ಹೃದಯದ ಹಕ್ಕಿ, ಆ ನಿರ್ಮಲ ಒರತೆ, ಅಂತರ್ವಾಣಿ, ಅದು ಜೀವಂತವಿತ್ತು. ಅದನ್ನು ನೆನಸಿ ಕೊಂಡು ಸಿದ್ಧಾರ್ಥ ಹರ್ಷಚಿತ್ತನಾದ. ನರೆತ ತಲೆಗೂದಲುಳ್ಳ ಅವನ ಮುಖವು ಪ್ರಕಾಶಮಾನವಾಯಿತು.

ಪ್ರತಿಯೊಂದನ್ನು ನಾನು ಅನುಭವಿಸುವುದೇ ಒಳ್ಳೇದು. ಐಶ್ವರ್ಯ, ಪ್ರಾಪಂಚಿಕ ಸುಖಗಳೆಲ್ಲ ಒಳ್ಳೇಯದಲ್ಲ ಎಂದು ಬಾಲಕನಾಗಿದ್ದಾಗ ಕಲಿತೆ. ಅದನ್ನು ನಾನು ತಿಳಿದುಕೊಂಡು ದೀರ್ಘಕಾಲವಾಯಿತು. ಆದರೆ ಈಗ ಮಾತ್ರ ಅದು ಅನುಭವಕ್ಕೆ ಬಂತು. ಈಗ ಬುದ್ಧಿ ಮಾತ್ರವಲ್ಲ ಕಣ್ಣು, ಹೃದಯ, ದೇಹ ದೃಷ್ಟಿಗಳಿಂದಲೂ ಅದು ಸಂಪೂರ್ಣ ಅನುಭವವಾಗಿದೆ.

ತನ್ನಲ್ಲುಂಟಾದ ಅಮಿತ ಬದಲಾವಣೆಯನ್ನು ಯೋಚಿಸಿದ. ಹೃದಯದ ಹಕ್ಕಿಯ ಕೋಮಲ ವಾಣಿ ಆಲಿಸಿದ. ಅವನಲ್ಲಿರುವ ಯಾವುದೋ ಒಂದು ವಸ್ತು ನಾಶವಾಗಿದೆ. ಅದು ಸಾಯಬೇಕೆಂದು ಅವನು ಬಯಸಿದ್ದ. ಅದೇ ಉದ್ದೇಶದಿಂದ ಯತಿಯಾಗಿದ್ದಾಗ ತಪಗೈದ ಈಗ ಸತ್ತಿರುವ ವಸ್ತು ಅಹಂಕಾರ ಅದರೊಂದಿಗೆ ಅನೇಕ ವರುಷಗಳ ವರೆಗೆ ಹೋರಾಡಿದ್ದ. ಪ್ರತಿ ಸಲವೂ ಅದೇ ಅವನನ್ನು ಜಯಿಸಿತ್ತು. ಆಗಾಗ ಮತ್ತೆ ತನ್ನ ಹೆಡೆ ಎತ್ತಿತ್ತು. ಸುಖವನ್ನು ಅಪಹರಿಸಿ ಭಯ ತುಂಬಿತ್ತು. ಆದರೆ ಈ ಪ್ರಿಯ ನದಿಯ ದಡದಲ್ಲಿ ಅದು ಸತ್ತಿತು. ಅದರ ಸಾವಿನಿಂದಲೇ ಅವನೀಗ ಮಗುವಿನ ಹಾಗೆ, ನಿರ್ಭೀತಿಯಿಂದ ಸುಖ ಸಂತೋಷ ವಿಶ್ವಾಸಗಳುಳ್ಳವನಾಗಿರುವನಲ್ಲವೇ?

ಬ್ರಾಹ್ಮಣನಾಗಿದ್ದಾಗ ಮತ್ತು ಯತಿಯಾಗಿದ್ದಾಗ ಈ ಅಹಂಕಾರವನ್ನು ಜಯಿಸಲಾಗದೆ ಇದ್ದುದರ ಕಾರಣವೂ ಅವನಿಗೆ ಹೊಳೆಯಿತು. ಅತಿ ಜ್ಞಾನ, ಅಸಂಖ್ಯ ಶ್ಲೋಕಗಳು, ನಾನಾ ಯಾಗ ಯಜ್ಞಕರ್ಮ, ಅತಿ ದೇಹ ದಂಡನೆ, ಅತಿ ಕೆಲಸ, ಇವು ಅತ್ಯಂತ ದೊಡ್ಡ ಅಡೆತಡೆಗಳಾಗಿ ಪರಿಣಮಿಸಿದುವು. ಅವನಿಗೆ ತುಂಬಾ ಸೊಕ್ಕಿತ್ತು. ತಾನೇ ಬುದ್ಧಿವಂತ, ಎಲ್ಲರಿಗಿಂತಲೂ ಮುಂದೆ, ಜ್ಞಾನಿ, ಪುರೋಹಿತ, ಋಷಿ ಎಂಬ ಗರ್ವ. ಈ ಅಹಂಭಾವ

ಗಟ್ಟಿಯಾಗಿ ಬೆಳೆಯಿತು. ಆದರೆ ಉಪವಾಸ ಮತ್ತು ಧ್ಯಾನದಿಂದ ಅದನ್ನು ನಾಶಗೊಳಿಸುತ್ತಿರುವೆನೆಂದು ಅವನು ಭಾವಿಸಿದ್ದ.

ಅದು ಈಗ ಅವನಿಗೆ ಗೊತ್ತಾಯಿತು. ಅವನ ಅಂತರ್ವಾಣಿ ಸತ್ಯ. ಯಾವ ಗುರುವಿನಿಂದಲೂ ಅವನ ಉದ್ಧಾರವಾಗುತ್ತಿದ್ದಿಲ್ಲ. ಆದುದರಿಂದಲೇ ಅವನು ಪ್ರಪಂಚವನ್ನು ಇದಿರಿಸಿ, ಹೊನ್ನು, ಹೆಣ್ಣು, ಮಣ್ಣುಗಳಲ್ಲಿ ತೊಳಲ ಬೇಕಾಯಿತು. ಆ ಕಾರಣದಿಂದಲೇ ಅವನು ವ್ಯಾಪಾರಿಯಾದ, ಜೂಜುಗಾರನಾದ, ಕುಡುಕನಾದ, ಸಿರಿವಂತನಾದ ಅಷ್ಟು ಭೀಕರ ಕಾಲ ಕಳೆದುದೂ ಅಸಹ್ಯಪಟ್ಟುದುದೂ, ಕೊನೆಯ ವರೆಗೆ ಶೂನ್ಯ ಜೀವನ ನಡೆಸಿದುದೂ ನಿರಾಶೆಯ ಸ್ಥಿತಿ ಮುಟ್ಟಿದುದೂ ಅದೇ ದೆಸೆಯಿಂದಲೇ. ಧನದಾಸೆ ಹಾಗೂ ಸುಖಾಪೇಕ್ಷೆಯ ಸಿದ್ಧಾರ್ಥ ಸಾಯಲೆಂದೇ ಹಾಗಾಯಿತು. ಅದರಂತೆ ಅವನು ಮರಣ ಹೊಂದಿದ ಮತ್ತು ನಿದ್ದೆಯಿಂದ ಹೊಸ ಸಿದ್ಧಾರ್ಥ ಎಚ್ಚರ ಹೊಂದಿದ. ಇವನೂ ವಯೋವೃದ್ಧನಾಗಿ ಸಾಯುತ್ತಾನೆ. ಸಿದ್ಧಾರ್ಥ ಅಸ್ಥಿರ. ದೃಶ್ಯ ರೂಪಗಳೆಲ್ಲ ಅಸ್ಥಿರ. ಆದರೆ ಇಂದು ಅವನು, ಈ ಸಿದ್ಧಾರ್ಥ ಒಂದು ಮಗು; ಸುಖಿ

ಈ ವಿಚಾರಗಳು ಅವನ ಮನಸ್ಸಿನಲ್ಲಿ ಹಾದು ಹೋದುವು. ಕೂಗುತ್ತಿದ್ದ ತನ್ನ ಹೊಟ್ಟೆಯನ್ನು ನಗುತ್ತ ನೋಡಿದ. ಇದಿರಿಗೆ ಬಂದ ತುಂಬಿಯ ಝೇಂಕಾರಕ್ಕೆ ಕಿವಿಗೊಟ್ಟ ಹರಿವ ನದಿಯನ್ನು ಸಂತೋಷದಿಂದಲೇ ನೋಡಿದ. ಯಾವ ನದಿಯೂ ಇದರಂತೆ ಅವನನ್ನು ಆಕರ್ಷಿಸಿರಲಿಲ್ಲ. ನದಿಯ ನೀರು, ಅದು ಹರಿವ ರೀತಿಯಲ್ಲೂ ಎಂತಹ ಸೌಂದರ್ಯ! ತಾನರಿಯದ, ತಿಳಿಯಲು ಬಯಸುವ ಯಾವುದೋ ಒಂದು ರಹಸ್ಯವನ್ನು ಈ ನದಿ ಹೇಳುವಂತಿತ್ತು. ಹತಾಶೆಯ, ಆಯಾಸಹೊಂದಿದ, ಕಂಗೆಟ್ಟ, ಮುದುಕ ಸಿದ್ಧಾರ್ಥ ಈ ನದಿಯಲ್ಲಿ ಮುಳುಗಲೆತ್ನಿಸಿದ್ದ. ಆದರೆ ಹೊಸ ಸಿದ್ಧಾರ್ಥ ಅದನ್ನು ಬಹುವಾಗಿ ಪ್ರೀತಿಸಲಾರಂಭಿಸಿದ. ಅದನ್ನು ಬೇಗನೇ ಬಿಟ್ಟು ಹೋಗಲೂ ಅವನಿಗೆ ಮನಸಿಲ್ಲ.

# ೧೦ ನೆಯ ಅಧ್ಯಾಯ

ನಾನು ಈ ನದಿಯ ಸಮೀಪ ಇರಬಯಸುತ್ತೇನೆ. ನಗರಕ್ಕೆ ಹೋದಾಗ ಮಾರ್ಗ ಮಧ್ಯೆ ಇದೇ ಹೊಳೆಯನ್ನು ದಾಟಿದೆ. ಸ್ನೇಹಿತನಾದ ದೋಣಿಗಾರ ದಾಟಿಸಿದ. ನಾನು ಅವನಿದ್ದಲ್ಲಿ ಹೋಗುತ್ತೇನೆ. ಅವನ ಮನೆಯಿಂದ ಹೊರಟ ನಾನು ಹೊಸ ಜೀವನದ ದಾರಿ ಹಿಡಿದೆ. ಅದು ಈಗ ಹಳೆಯದು. ಸತ್ತು ಹೋಗಿದೆ. ನನ್ನ ಹೊಸ ದಾರಿ, ನವ ಜೀವನವು ಮತ್ತೆ ಅಲ್ಲಿಂದಲೇ ಆರಂಭವಾಗಲಿ!

ಎಂದು ಯೋಚಿಸುತ್ತ ಸಿದ್ಧಾರ್ಥ ಹಸುರು ಪಾರದರ್ಶಕವಾಗಿಯೂ ಸ್ಫಟಿಕ ಗೆರೆಗಳಂತೆಯೂ ಹರಿವ ನೀರನ್ನು ಪ್ರೀತಿಪುರಸ್ಸರವಾಗಿ ನೋಡಿದ. ನದಿಯ ತಳದಿಂದ ಹೊಳೆ ಹೊಳವ ಮುತ್ತುಗಳು ಮೇಲಕ್ಕೆ ಬರುತ್ತಿದ್ದುವು! ಆ ಗುಳ್ಳೆಗಳು ಕನ್ನಡಿಯ ಮೇಲೆ ಈಸುತ್ತಿದ್ದುವು. ಆಕಾಶದ ನೀಲ ಅವುಗಳಲ್ಲಿ ಪ್ರತಿಬಿಂಬಿಸಿದ್ದುವು! ಹಸುರು, ಬಿಳಿ, ನೀಲ ಇತ್ಯಾದಿ ಸಾವಿರ ನೇತ್ರಗಳಿಂದ ನದಿ ಅವನನ್ನು ನೋಡುತಿತ್ತು ಈ ನದಿಯ ಮೇಲೆ ಅವನಿಗೆಷ್ಟು ಪ್ರೇಮ! ಅದು ಅವನನ್ನು ಮೋಹಿಸಿದೆ! ಅದಕ್ಕೆ ಅವನು ಋಣಿ! ಹೊಸದಾಗಿ ಅವನ ಹೃದಯದಲ್ಲಿ ಜಾಗೃತವಾದ ವಾಣಿ ಹೇಳಿತು: "ಈ ನದಿಯನ್ನು ಪ್ರೀತಿಸು ಇದರ ಬಳಿ ಇರು. ಅದರಿಂದ ಕಲಿ." ಹೌದು. ಅದರಿಂದ ಕಲಿಯಲು ಅವನ ಇಚ್ಛೆ. ಅದರ ಮಾತಿಗೆ ಕಿವಿಗೊಡಲು ಅವನ ಆಸೆ. ಈ ನದಿಯ ರಹಸ್ಯವನ್ನು ಅರಿತವರಿಗೆ ಎಲ್ಲ ರಹಸ್ಯಗಳನ್ನು ಗ್ರಹಿಸಲು ಶಕ್ಯವೆಂದು ಅವನಿಗೆ ಅನಿಸತೊಡಗಿದೆ.

ಆದರೆ ಈ ದಿನ ನದಿಯ ಒಂದು ರಹಸ್ಯವನ್ನು ಮಾತ್ರ ಅವನು ನೋಡಿದ. ಅವನು ಅದರಿಂದಲೇ ಮನ ಮೆಚ್ಚಿದ. ನೀರು ಸತತ ಹರಿಯುತ್ತಿದೆಯಾದರೂ ಅದು ಯಾವಾಗಲೂ ಇದೆ. ಅದೇ ನೀರು. ಆದರೆ ಕ್ಷಣ ಕ್ಷಣಕ್ಕೂ ಹೊಸದು. ಇದನ್ನಾರು ಬಲ್ಲರು? ಅವನಿಗೆ ಅರ್ಥವಾಗಲಿಲ್ಲ. ಏನೋ, ಒಂದು ಸಂಶಯ, ಏನೋ ಒಂದು ಹಳೇ ಸ್ಮರಣೆ, ಏನೋ ಒಂದು

ದೈವೀ ವಾಣಿ ಅವನಿಗೆ ಅನುಭವವಾಗುತ್ತಿದೆ.

ಹಸಿವೆಯ ಬಾಧೆ ತಾಳಲಾರದೆ ಸಿದ್ಧಾರ್ಥ ಅಲ್ಲಿಂದೆದ್ದ. ಕಷ್ಟದಿಂದ ನದಿಯ ದಂಡೆಯ ಮೇಲೆ ನಡೆದು ಹೋದ. ನೀರಿನ ಸೆಳೆತವನ್ನೂ ಹೊಟ್ಟೆಯ ಮೊಳೆತವನ್ನೂ ಆಲಿಸಿದ.

ಅವನು ಕಡವಿನ ಸ್ಥಳಕ್ಕೆ ಬಂದಾಗ ದೋಣಿ ಅಲ್ಲಿ ಸಿದ್ಧವಾಗಿತ್ತು. ಹಿಂದೆ ಸಿದ್ಧಾರ್ಥ ಯತಿಯಾಗಿದ್ದಾಗ ನದಿ ದಾಟಿಸಿದ್ದ ಅಂಬಿಗನೂ ದೋಣಿಯಲ್ಲಿದ್ದ. ಅವನನ್ನು ಕಂಡೊಡನೆ ಸಿದ್ಧಾರ್ಥ ಗುರುತು ಹಿಡಿದ. ದೋಣಿಗಾರನಿಗೂ ಈಗ ತುಂಬಾ ವಯಸ್ಸಾಗಿದೆ.

"ನನ್ನನ್ನು ದಾಟಿಸುವೆಯಾ?" ಎಂದು ಸಿದ್ಧಾರ್ಥ ಕೇಳಿದ.

ಈ ಶ್ರೀಮಂತರ ವೇಷಭೂಷಣದಿಂದಿರುವವನು ಕಾಲ್ನಡಿಗೆಯಿಂದಲೇ ಬಂದುದನ್ನು ಕಂಡ ದೋಣಿಗಾರನು ಮೊದಲು ವಿಸ್ಮಿತನಾದ. ಹೊಳೆ ದಾಟಿಸುವುದಾಗಿ ಕೂಡಲೇ ಒಪ್ಪಿಕೊಂಡ.

ದೋಣಿ ನದಿಯನ್ನು ಸೀಳಿಕೊಂಡು ಮುಂದೆ ಮುಂದೆ ಚಲಿಸಿತು. ಸಿದ್ಧಾರ್ಥ ಹೇಳಿದ: "ನಿನ್ನದು ಉತ್ತಮ ಜೀವನ. ಈ ನದಿಯ ಬಳಿ ವಾಸಿಸುತ್ತ ದಿನಂಪ್ರತಿ ಅದರ ಮೇಲೆ ಚಲಿಸುವುದು ಲೇಸು"

ದೋಣಿಗಾರ ಮುಗುಳು ನಕ್ಕು ನುಡಿದ: "ಹೌದು ಸ್ವಾಮಿ, ಒಳ್ಳೇದೇ. ಆದರೆ ಪ್ರತಿಯೊಂದು ರೀತಿಯ ಜೀವನವೂ ಕೆಲಸವೂ ಒಳ್ಳೆಯದಲ್ಲವೇ?"

"ಇರಬಹುದು. ಆದರೆ ನಿನ್ನ ಜೀವನ ಮತ್ತು ಕೆಲಸ ಕಂಡು ನನಗೆ ಈರ್ಷ್ಯೆಯಾಗುತ್ತದೆ."

"ಓಹೋ, ನೀವು ಈ ಕೆಲಸ ಮಾಡಿದರೆ ಬೇಗನೇ ಬೇಸರ ಪಡದೇ ಇರಲಾರಿರಿ. ಉತ್ತಮ ಬಟ್ಟೆಬರೆ ತೊಡುವಂತವರಿಗೆ ಇದು ಹೇಳಿದ ಕೆಲಸವಲ್ಲ."

ಸಿದ್ಧಾರ್ಥ ನಕ್ಕ. "ನನ್ನ ಈ ವಸ್ತ್ರನೋಡಿ ನನ್ನನ್ನು ಸಂಶಯದಿಂದ ನೋಡಿದೆಯಲ್ಲ. ಈ ಬಟ್ಟೆಗಳೊಂದು ಪೀಡೆ. ಇದನ್ನು ತೆಗೆದುಕೊಳ್ಳುವೆಯಾ? ಹೊಳೆ ದಾಟಿಸಿದುದಕ್ಕೆ ಹಣ ಕೊಡಲು ನನ್ನಲ್ಲಿ ಬೇರೇನೂ ಇಲ್ಲ" ಎಂದ.

ದೋಣಿಗಾರ ನಗುತ್ತ ನುಡಿದ: "ಒಳ್ಳೇ ತಮಾಷೆ ಮಾಡುತ್ತೀರಲ್ಲ?"

"ತಮಾಷೆಯಲ್ಲ ಮಾರಾಯಾ! ಹಿಂದೊಮ್ಮೆ ಕಾಸು ತೆಗೆದುಕೊಳ್ಳದೆ ನನ್ನನ್ನು ನದಿ ದಾಟಿಸಿದ್ದೆ. ಈಗಲೂ ಹಾಗೆ ಮಾಡದೆ ಈ ಬಟ್ಟೆಗಳನ್ನೆಲ್ಲ ತೆಗೆದುಕೊಂಡು ಬಿಡು.''

"ಹಾಗಿದ್ದರೆ ಬಟ್ಟೆಗಳಿಲ್ಲದೆ ಮುಂದಕ್ಕೆ ಹೋಗುತ್ತೀರಾ ಸ್ವಾಮಿ ?"

"ನಾನು ಇಲ್ಲಿಂದ ಮತ್ತೆಲ್ಲೂ ಹೋಗುವದಿಲ್ಲ. ನೀನು ಕೆಲವು ಹಳೇ ಬಟ್ಟೆಗಳನ್ನು ಕೊಟ್ಟು, ನಿನ್ನ ಸಹಾಯಕನಾಗಿ ಇಟ್ಟುಕೊಂಡರೆ ಇಟ್ಟುಕೋ. ಈ ದೋಣಿ ನಡೆಸುವುದನ್ನು ಕಲಿಯಬೇಕಾಗಿದೆ ನೋಡು.''

ದೋಣಿಯವನು ಈ ಅಪರಿಚಿತನನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದ.

ಆ ಮೇಲೆ ಹೇಳಿದ: "ಓಹೋ, ಈಗ ನನಗೆ ಗುರುತು ಹತ್ತಿತು. ಹಿಂದೊಮ್ಮೆ ನೀನು ನನ್ನ ಗುಡಿಸಲಿನಲ್ಲಿ ಮಲಗಿದ್ದೀಯಲ್ಲ! ಬಹಳ ಕಾಲ ವಾಯಿತು. ಹೆಚ್ಚು ಕಡಿಮೆ ಇಪ್ಪತ್ತು ವರುಷಗಳಾಗಿರಬಹುದು. ನಾನು ನಿನ್ನನ್ನು ಹೊಳೆ ದಾಟಿಸಿದೆ. ನಿನ್ನ ಸ್ನೇಹವನ್ನೂ ಯಾಚಿಸಿದೆ. ನೀನಾಗ ಸನ್ಯಾಸಿಯಾಗಿದ್ದೀ. ಅಲ್ಲ? ನಿನ್ನ ಹೆಸರು ಮಾತ್ರ ನೆನಪಿನಲ್ಲಿಲ್ಲ"

"ನನ್ನ ಹೆಸರು ಸಿದ್ಧಾರ್ಥ. ಆಗ ನಾನು ಸನ್ಯಾಸಿಯಾಗಿದ್ದೆ."

"ಹಾಂ, ಹಾಂ, ಸಿದ್ಧಾರ್ಥ! ನಿನಗೆ ಸ್ವಾಗತ. ನನ್ನ ಹೆಸರು ವಾಸುದೇವ. ಈ ಹೊತ್ತು ನನ್ನ ಮನೆಗೆ ನನ್ನ ಅತಿಥಿಯಾಗಿ ಬಾ. ರಾತ್ರಿ ಸಹ ನನ್ನ ಗುಡಿಸಲಲ್ಲಿ ಇರು. ಈಗ ನೀನು ಎಲ್ಲಿಂದ ಬಂದೆ? ನಿನಗೆ ಈ ಉತ್ತಮ ವಸ್ತ್ರಗಳ ಮೇಲೆ ಜಿಗುಪ್ಸೆ ಏಕೆ ಬಂತು? ಅದನ್ನೆಲ್ಲ ಹೇಳು."

ದೋಣಿ ನದಿಯ ನಡುವೆ ಸಾಗಿತು. ಅಲ್ಲಿ ಸೆಳೆತ ಹೆಚ್ಚಾಗಿದ್ದುದರಿಂದ ವಾಸುದೇವ ಬಲದಿಂದ ಹುಟ್ಟು ಹಾಕಿದ. ಅವನ ಕೈಗಳೂ ಬಲವಾಗಿವೆ. ದೋಣಿಯ ಹಿಂಭಾಗವನ್ನು ನೋಡುತ್ತ ಹುಟ್ಟು ಹಾಕತೊಡಗಿದ. ಸಿದ್ಧಾರ್ಥ ಮೌನವಾಗಿ ಕುಳಿತು ಹಿಂದೆ ತಾನು ಸನ್ಯಾಸಿಯಾಗಿದ್ದಾಗ ಈ ಅಂಬಿಗನ ಸ್ನೇಹ ಗಳಿಸಿದುದನ್ನು ನೆನಸಿಕೊಂಡ. ವಾಸುದೇವನ ಅತಿಥಿಯಾಗಲು ಈಗ ಕೂಡಾ ಒಪ್ಪಿದ. ದೋಣಿ ನದಿಯ ದಂಡೆಗೆ ಮುಟ್ಟಿದ ಮೇಲೆ ಅದನ್ನು ಎಳೆದು ಒಂದು ಗೂಟಕ್ಕೆ ಬಿಗಿಯಲು ಸಿದ್ಧಾರ್ಥನೂ ನೆರವಾದ. ಆ ಮೇಲೆ ವಾಸುದೇವ ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದ.

ಊಟಕ್ಕೆ ರೊಟ್ಟಿ ನೀಡಿದ. ಸಿದ್ಧಾರ್ಥ ಅದನ್ನು ಸಂತೋಷದಿಂದ ತಿಂದು ನೀರು ಕುಡಿದ. ಆ ಮೇಲೆ ವಾಸುದೇವನು ಕೊಟ್ಟ ಒಂದು ಮಾವಿನ ಹಣ್ಣನ್ನು ಸವಿದ.

ಸೂರ್ಯಾಸ್ತ ಸಮಯ ಅವರಿಬ್ಬರೂ ನದಿಯ ದಂಡೆಯಲ್ಲಿದ್ದ ಒಂದು ಮರದ ತುಂಡಿನ ಮೇಲೆ ಕುಳಿತರು. ಸಿದ್ಧಾರ್ಥ ಅಂದಿನ ವರೆಗಿನ ತನ್ನ ಜೀವನವನ್ನು ಮುಚ್ಚುಮರೆಯಿಲ್ಲದೆ ನುಡಿದ.

ವಾಸುದೇವನೂ ಕಿವಿಗೊಟ್ಟ. ಸಿದ್ಧಾರ್ಥನ ಮೂಲ, ಬಾಲ್ಯ, ಅಭ್ಯಾಸ, ಸಾಧನೆ, ವಿಷಯಾಸಕ್ತಿಗಳನ್ನೆಲ್ಲ ಆಲಿಸಿದ. ಆ ದೋಣಿಗಾರನಲ್ಲಿ ಕಥೆ ಕೇಳುವ ದೊಡ್ಡ ಸದ್ಗುಣವಿದೆ. ವಾಸುದೇವನು ಬಾಯಿ ಬಿಟ್ಟು ಹೇಳದಿದ್ದರೂ ಅವನು ಪ್ರತಿಯೊಂದು ಪದವನ್ನು ನುಂಗುತ್ತಿರುವನೆಂದು ಹೇಳುವವನಿಗೆ ಗೊತ್ತಾಗುತ್ತದೆ. "ಮುಂದೇನಾಯಿತು?" ಎಂದು ಅಸಹನೆ ತೋರಿಸಲಾರ. ಕೇಳುವುದೊಂದೇ ಅವನಿಗೆ ಗೊತ್ತು. ಈ ರೀತಿ ಕೇಳುವವನು ನಿಜವಾಗಿಯೂ ಹೇಳುವವನ ಸುಖದುಃಖಗಳಲ್ಲಿ ಸಂಪೂರ್ಣ ತಾದ್ಯಾತ್ಮ ಹೊಂದುತ್ತಾನೆಂದು ಸಿದ್ಧಾರ್ಥನಿಗೂ ಅನ್ನಿಸಿತು.

ಕಥೆಯ ಅಂತ್ಯದಲ್ಲಿ ನದಿಯ ಬಳಿ ಇರುವ ತೆಂಗಿನ ಮರ, ತನ್ನ ನಿರಾಶೆ, ಆತ್ಮಹತ್ಯ ಬುದ್ಧಿ, ಓಂಕಾರ ಉಚ್ಚಾರ, ನಿದ್ದೆ, ನವಜಾಗ್ರತಿ, ನದಿಯ ಮೇಲಿನ ಪ್ರೀತಿ, ಇವನ್ನೆಲ್ಲ ಸಿದ್ಧಾರ್ಥ ವಿವರಿಸಿದಾಗ ವಾಸುದೇವ ಕಣ್ಣುಗಳೆರಡನ್ನು ಮುಚ್ಚಿಕೊಂಡು ಎರಡೂ ಕಿವಿಗಳನ್ನು ನಿಗುರಿಸಿಕೊಂಡ.

ಸಿದ್ಧಾರ್ಥ ಮುಗಿಸಿದ. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿಯೇ ಇದ್ದರು. ಕೊನೆಗೆ ವಾಸುದೇವ ಹೇಳಿದ: "ನಾನು ಯೋಚಿಸಿದಂತೆಯೇ ಆಗಿದೆ. ಸರಿ. ನಿನ್ನೊಡನೆ ಅದು ಮಾತನಾಡಿದೆ. ನಿನ್ನ ಮೇಲೆ ಕೂಡ ಅದಕ್ಕೆ ಸ್ನೇಹ. ನೋಡು ಅದು ನಿನ್ನೊಡನೆ ಮಾತನಾಡುತ್ತಿದೆ. ಅದು ಒಳ್ಳೇದೇ. ಸಿದ್ಧಾರ್ಥ, ನೀನು ನನ್ನೊಡನೆ ಇರು ಮಿತ್ರಾ, ನನಗೂ ಒಬ್ಬ ಹೆಂಡತಿ ಇದ್ದಳು. ಅವಳು ಸತ್ತು ಅನೇಕ ವರುಷಗಳಾದುವು. ದೀರ್ಘಕಾಲದಿಂದ ಒಬ್ಬಂಟಿಗನಾಗಿಯೇ ಇದ್ದೇನೆ. ನೀನೂ ನನ್ನೊಂದಿಗೆ ವಾಸಿಸು. ಇರಲು ಸ್ಥಳವಿದೆ. ಉಣಲು ಇಬ್ಬರಿಗೆ ಸಾಲುವಷ್ಟು ಆಹಾರ ವಸ್ತುಗಳೂ ಇವೆ.

ಸಿದ್ಧಾರ್ಥ ಉತ್ತರವಿತ್ತ: "ನಿನಗೆ ಧನ್ಯವಾದ. ನಿನ್ನ ಮಾತಿಗೆ

ಒಪ್ಪಿದೆ. ನನ್ನ ಕಥೆಗೆ ಕಿವಿಗೊಟ್ಟುದುದಕ್ಕಾಗಿಯೂ ಅನಂತ ನಮಸ್ಕಾರ. ಹೇಗೆ ಆಲಿಸಬೇಕೆಂದು ತಿಳಿದವರು ವಿರಳ. ನಿನ್ನಂತವನನ್ನು ನಾನು ಭೆಟ್ಟಿಯಾಗಿಯೂ ಇಲ್ಲ. ಇದನ್ನು ನಿನ್ನಿಂದ ಕಲಿತು ಕೊಳ್ಳಬೇಕೆಂದಿದ್ದೇನೆ."

"ನೀನು ಕಲಿಯುತ್ತೀ" ಎಂದ ವಾಸುದೇವನು ಮತ್ತೆ ಮಾತು ಮುಂದುವರಿಸಿದ: "ಆದರೆ ನನ್ನಿಂದಲ್ಲ. ಈ ನದಿಯೇ ನನಗೂ ಕಲಿಸಿತು. ನಿನಗೂ ಅದೇ ಗುರು. ನದಿಗೆ ಸರ್ವವೂ ಗೊತ್ತಿದೆ. ಆದರಿಂದ ಸರ್ವಸ್ವವನ್ನು ಕಲಿಯಲು ಸಾಧ್ಯ. ಮುಳುಗಿ ತಳವನ್ನು ಕಾಣಬೇಕೆಂದು ನೀನು ಈಗಾಗಲೇ ತಿಳಿದುಕೊಂಡಿದ್ದೀಯಾ! ಶ್ರೀಮಂತನಾದ ಸಿದ್ಧಾರ್ಥ ಸಾಮಾನ್ಯ ದೋಣಿಗನಾಗುತ್ತಾನೆ! ಇದನ್ನು ಈ ನದಿಯಿಂದಲೇ ಕಲಿತಿಯಲ್ಲ! ಇನ್ನೊಂದನ್ನೂ ನೀನು ತಿಳಿದುಕೊಳ್ಳುತ್ತೀಯಾ."

ಸಿದ್ಧಾರ್ಥ ಸ್ವಲ್ಪ ಹೊತ್ತು ಆಲೋಚಿಸಿ ಕೇಳಿದ: "ಇನ್ನೊಂದು ಯಾವುದು?"

ವಾಸುದೇವ ಎದ್ದ. "ಈಗ ವೇಳೆಯಾಯಿತು. ಇನ್ನು ಮಲಗೋಣ. ಇನ್ನೊಂದು ಏನೆಂದು ನಾನು ಹೇಳಲಾರೆ, ಗೆಳೆಯಾ. ನೀನೇ ಅದನ್ನು ಹುಡುಕುತ್ತೀಯಾ. ಪ್ರಾಯಶಃ ಈಗಲೇ ನಿನಗದು ಗೊತ್ತಿರಬಹುದು. ನಾನು ಜ್ಞಾನಿಯಲ್ಲ. ಆಲೋಚನೆ ಮಾಡಲಾರೆ. ಸಂವಾದಿಸಲೂ ಗೊತ್ತಿಲ್ಲ. ಕೇಳಲು ಮತ್ತು ನಿಷ್ಠಾವಂತನಾಗಿರಲು ಮಾತ್ರ ಬಲ್ಲೆ. ಮತ್ತೇನನ್ನೂ ನಾನು ಕಲಿತಿಲ್ಲ. ಬೋಧಿಸಲು ಮತ್ತು ಸಂಭಾಷಿಸಲು ಬರುತಿದ್ದರೆ ನಾನೂ ಒಬ್ಬ ಗುರುವಾಗುತಿದ್ದೆ. ಆದರೆ ನಾನು ಸಾಮಾನ್ಯ ದೋಣಿಗಾರ ಮಾತ್ರ. ಜನರನ್ನು ಹೊಳೆ ದಾಟಿಸಿ ಬಿಡುವುದು ನನ್ನ ಕೆಲಸ. ಸಾವಿರಾರು ಜನರನ್ನು ದಡಮುಟ್ಟಿಸಿರುತ್ತೇನೆ. ಅವರೆಲ್ಲರಿಗೂ ಈ ನದಿ ತಮ್ಮ ಪ್ರಯಾಣ ಮಾರ್ಗದಲ್ಲೊಂದು ಆತಂಕ. ಧನಸಂಪಾದನೆಗೆ, ವ್ಯಾಪಾರಕ್ಕೆ, ಮದುವೆಗೆ, ಯಾತ್ರೆಗೆ ಅವರೆಲ್ಲ ತೆರಳುತಿದ್ದರು. ಮಾರ್ಗ ಮಧ್ಯೆ ಈ ನದಿ ಇದೆ. ಅವರನ್ನು ದಾಟಿಸಲು ಈ ಅಂಬಿಗನಿದ್ದಾನೆ. ಆದರೆ ಆ ಸಾವಿರಾರು ಜನರಲ್ಲಿ ಹೊಳೆಯೊಂದು ಅಡ್ಡಿಯೆಂದು ಭಾವಿಸದ ನಾಲ್ಕಾರು ಜನರೂ ಇದ್ದರು. ಅವರು ಅದರ ವಾಣಿಯನ್ನು ಆಲಿಸಿರುವರು. ಅದು ನನ್ನಂತೆ ಅವರಿಗೂ ಪವಿತ್ರ

ವಾಗಿವೆ. ಸಿದ್ಧಾರ್ಥ! ಇನ್ನು ನಾವು ನಿದ್ದೆ ಮಾಡೋಣ" ಎಂದು ವಾಸು ದೇವ ಹೇಳಿದ.

ಸಿದ್ಧಾರ್ಥ ದೋಣಿಗಾರನೊಡನೆ ವಾಸಿಸಿದ. ಕ್ರಮೇಣ ದೋಣಿ ನಡೆ ಸಲೂ ಕಲಿತುಕೊಂಡ. ಕಡವಿನಲ್ಲಿ ಕೆಲಸವಿಲ್ಲದಾಗ ವಾಸುದೇವನೊಂದಿಗೆ ಭತ್ತದ ಗದ್ದೆಯಲ್ಲಿ ಗೈಮೆ ಗೈದ. ಅವನೊಂದಿಗೆ ಸೌದೆ ತಂದ. ಹುಟ್ಟು ಕೆತ್ತು ವುದು,ದೋಣಿ ದುರಸ್ತಿ, ಬುಟ್ಟಿ ಹೆಣೆಯುವುದು ಇವನ್ನು ಹೆಕ್ಕಿಕೊಂಡ. ಎಲ್ಲ ಕೆಲಸವಲ್ಲೂ ಅವನಿಗೆ ಪ್ರೀತಿಯೇ ಹೀಗಾಗಿ ದಿವಸಗಳೂ ತಿಂಗಳುಗಳೂ ಅರೆನಿಮಿಷಗಳಂತೆ ಹಾರಿಹೋಗುವುವು. ಆದರೆ ಅವನು ವಾಸುದೇವನಿಗಿಂತಲೂ ನದಿಯಿಂದ ಕಲಿತುಕೊಂಡುದುದೇ ಹೆಚ್ಚು. ಶಾಂತ ಹೃದಯದಿಂದ, ಸಹನೆಯಿಂದ, ಮುಕ್ತ ಹೃದಯದಿಂದ, ನಿಷ್ಕಾಮದಿಂದ, ಅನುಕೂಲಪ್ರತಿ ಕೂಲ ನಿರ್ಣಯ ಕೊಡುವ ಹವ್ಯಾಸಕ್ಕೆ ಬೀಳದೆ ಕಿವಿಗೊಟ್ಟು ಆಲಿಸುವಂತಹ ಅದ್ಭುತ ವಿದ್ಯೆಯನ್ನು ಅವನು ಅಭ್ಯಸಿಸಿದ.

ವಾಸುದೇವನೊಂದಿಗೆ ಸಂತೋಷದಿಂದ ಅವನು ಬಾಳತೊಡಗಿದ. ಆಗಾಗ ಅವರು ಮಾತನಾಡುತಿದ್ದರು. ಆದರೆ ಎಷ್ಟು ಬೇಕೋ ಅಷ್ಟೇ ಮಾತುಗಳನ್ನು ಆರಿಸಿ ಆರಿಸಿ ನುಡಿಯುತಿದ್ದರು ವಾಸುದೇವನು ಅಕ್ಷರ ಶತ್ರು. ಸಿದ್ಧಾರ್ಥ ಮಿತಭಾಷಿ.

ಮಳೆಗಾಲದಲ್ಲಿ ನದಿಯು ನೆರೆ ನೀರಿನಿಂದ ತುಂಬಿ ಭೋರ್ಗರೆದು ಹರಿಯುತಿದ್ದಾಗ ಸಿದ್ಧಾರ್ಥ ಹೇಳಿದ: "ನದಿಯ ವಾಣಿಗಳೂ ಅನಂತವಾ ಗಿವೆಯಲ್ಲವೇ? ಅರಸ, ವೀರಯೋಧ, ಗೂಳಿ, ನಿಶಾಪಕ್ಷಿ, ಗರ್ಭಿಣಿ ಸ್ತ್ರೀ, ನಿಟ್ಟುಸಿರುಗರೆವ ಮಾನವ ಇವರೆಲ್ಲರ ಸಾವಿರಾರು ಧ್ವನಿ ಅವಕ್ಕೆ ಇರುವುದು ನಿಜವಲ್ಲವೇ?''

"ಹೌದು. ಹೌದು. ಜೀವಂತ ಪಶು ಪಕ್ಷಿಗಳೆಲ್ಲದರ ಧ್ವನಿ ಅದರಲ್ಲ ಡಗಿದೆ" ಎಂದು ವಾಸುದೇವ ತಲೆ ಅಲ್ಲಾಡಿಸಿದ.

"ಅದರ ಸಾವಿರಾರು ಧ್ವನಿಗಳನ್ನು ಏಕಕಾಲದಲ್ಲಿ ಆಲಿಸಿದಾಗ, ಅದು ಯಾವ ಶಬ್ದವನ್ನು ಉಚ್ಚರಿಸುತ್ತಿದೆಯೆಂದು ಗೊತ್ತಾಗುತ್ತದೆಯೇ?"

ವಾಸುದೇವ ಆನಂದದಿಂದ ನಕ್ಕ. ಸಿದ್ಧಾರ್ಥನ ಕಡೆ ಬಗ್ಗಿ "ಓಂ" ಕಾರವನ್ನು ಪಿಸುಗುಟ್ಟಿದ.

ಸಿದ್ಧಾರ್ಥನೂ ಅವೇ ಶಬ್ದವನ್ನು ಕೇಳಿದ್ದ.

ಕಾಲಕ್ರಮೇಣ ಅವನ ನಗು ದೋಣಿಗಾರನ ನಗುವನ್ನೇ ಹೋಲಲಾರಂಭಿಸಿತು. ಅಷ್ಟೇ ಪ್ರಕಾಶಮಾನ! ಅಷ್ಟೇ ಆನಂದದಾಯಕ.! ಇಬ್ಬರೂ ಮಕ್ಕಳಂತೆ ಇದ್ದರು ಇಬ್ಬರ ಮೋರೆಗಳಲ್ಲೂ ನೆರಿ ಬಿದ್ದವು. ಪ್ರಯಾಣಿಕರು ಅವರಿಬ್ಬರನ್ನೂ ನೋಡಿದಾಗ ಸಹೋದರರೆಂದು ತಿಳಿದುಕೊಂಡರು.

ಆಗಾಗ ಅವರು ಸಂಜೆ,ನದಿಯ ದಡದಲ್ಲಿರುವ ಮರದ ತುಂಡಿನ ಮೇಲೆ ಕುಳಿತಿರುವುದು ವಾಡಿಕೆ. ಇಬ್ಬರೂ ಮೌನ ಸಮಾಧಿಯಿಂದ ನೀರಿನ ಹರಿದಾಟವನ್ನು ಆಲಿಸುತಿದ್ದರು. ಅದು ಅವರಿಗೆ ಕೇವಲ ನೀರಿನ ಪ್ರವಾಹವಾಗಿರಲಿಲ್ಲ; ಜೀವವಾಣಿ, ಅಮರ ಸಂದೇಶವಾಗಿತ್ತು. ಒಮ್ಮೊಮ್ಮೆ ಅವರು ಆಲಿಸುತ್ತಿದ್ದಾಗ ಇಬ್ಬರೂ ಒಂದೇ ರೀತಿ ಯೋಚಿಸುತಿದ್ದರು. ಹಿಂದಿನ ದಿನ ತಾವು ನಡೆಸಿದ ಸಂಭಾಷಣೆ, ಭೆಟ್ಟಿಯಾಗಿದ್ದ ಪ್ರಯಾಣಿಕರ ಸ್ಥಿತಿಗತಿ ಅದೃಷ್ಟ, ಬಾಲ್ಯ ಅಥವಾ ಮರಣ ಇವೇ ಅವರ ಯೋಚನಾ ವಿಷಯಗಳಾಗಿದ್ದವು. ನದಿಯು ಏನಾದರೂ ಏಕಕಾಲಕ್ಕೆ ನುಡಿದರೆ ಅವರಿಬ್ಬರೂ ತಂತಮ್ಮ ಮೋರೆ ನೋಡಿಕೊಳ್ಳುತಿದ್ದರು. ತಮ್ಮ ಪ್ರಶ್ನೆಗೆ ಸರಿಯಾದ ಉತ್ತರ ದೊರೆತಿತೆಂದು ಅವರು ಸಂತಸಪಡುತಿದ್ದರು.

ಆ ಕಡವಿನ ಸ್ಥಳಕ್ಕೆ ಒಂದು ರೀತಿಯ ವೈಚಿತ್ರ್ಯವೂ ಬಂತು. ಅನೇಕ ಪ್ರವಾಸಿಕರು ಅಂತಹ ಅನುಭವಪಡತೊಡಗಿದರು. ಒಮ್ಮೊಮ್ಮೆ ಯಾವನಾದರೂ ಪ್ರಯಾಣಿಕನು ಆ ದೋಣಿಗಾರನೋರ್ವನನ್ನು ದಿಟ್ಟಿಸಿದನೆಂದರೆ, ಮುಂದೆ ತನ್ನ ಆದ್ಯಂತ ಕಥೆಯನ್ನು ಹೇಳತೊಡಗುವನು. ತನ್ನ ಜೀವನ, ತಾನು ಸಹಿಸಿದ ಕಷ್ಟ, ಮಾಡಿದ ಪಾಪಕೃತ್ಯಗಳನ್ನೆಲ್ಲ ಮನ ಬಿಚ್ಚಿ ಹೇಳಿ, ಸಲಹೆ ಸಮಾಧಾನೋಕ್ತಿಗಳನ್ನು ಕೇಳುತಿದ್ದನು. ಒಂದೊಂದು ಸಲ ಒಬ್ಬಿಬ್ಬರು ರಾತ್ರಿ ಅವರೊಂದಿಗೆ ಉಳಿದೂ ಬಿಡುತಿದ್ದರು. ಕಡವಿನ ಬಾಗಿಲಲ್ಲಿ ಮಂತ್ರವಾದಿಗಳೋ ಮಹಾತ್ಮರೋ ಜ್ಞಾನಿಗಳೋ ಯಾರೋ ಇದ್ದಾರೆಂದು ಹಬ್ಬಿದ ಸುದ್ದಿ ಕೇಳಿ ಕುತೂಹಲದಿಂದಲೂ ಅನೇಕರು ಅವರನ್ನು ಕಾಣಲು ಬಂದರು. ಈ ಜಿಜ್ಞಾಸುಗಳು ಪ್ರಶ್ನೆಗಳನ್ನೂ ಕೇಳಲಾರಂಭಿಸಿದರು. ಆದರೆ ಅವರಿಗೆ ಯಾವ ಉತ್ತರವೂ ದೊರೆಯಲಿಲ್ಲ. ಅವರು ಜ್ಞಾನಿಗಳನ್ನೂ ಕಾಣಲಿಲ್ಲ. ಮಂತ್ರವಾದಿಗಳನ್ನೂ ನೋಡಲಿಲ್ಲ. ವಯೋವೃದ್ಧರಾದ ಇಬ್ಬರು

ಸ್ನೇಹಿತರನ್ನು ಮಾತ್ರ ಅವರು ಕಂಡರು. ಅವರಿಬ್ಬರೂ ಮೂಕರೂ ಮೂರ್ಖರೂ ಆಗಿ ತೋರಿದರು. ಅಪನ್ನರಿತ ಜನರು ಅಪಹಾಸ್ಯದಿಂದ ಕೇಕೆ ಹೊಡೆದು ಅಂಥ ಸುಳ್ಳು ಸುದ್ದಿಯನ್ನು ಹಬ್ಬಿಸುವ ಜನರೆಂತಹ ಹುಚ್ಚರೆಂದು ಹಳಿದರು.

ವರುಷಗಳು ಉರುಳಿದುವು. ಯಾರೂ ಅವರನ್ನು ಗಣನೆಗೆ ತರಲಿಲ್ಲ. ಹೀಗಿರಲು ಒಂದು ದಿನ ಗೌತಮ ಬುದ್ಧನ ಅನುಯಾಯಿಗಳಾದ ಭಿಕ್ಷು ಗಳು ಬಂದರು. ತಮ್ಮನ್ನು ಹೊಳೆ ದಾಟಿಸಬೇಕೆಂದೂ ಕೇಳಿಕೊಂಡರು. ಮಹಾತ್ಮನಾದ ಬುದ್ಧನಿಗೆ ಅನಾರೋಗ್ಯವಾಗಿದೆ ಎಂದೂ ಮಹಾನಿರ್ವಾಣ ಕಾಲ ಸಮೀಪಿಸಿದೆ ಎಂದೂ ಸುದ್ದಿ ಹಬ್ಬಿದುದರಿಂದ ಅವನ ದರ್ಶನಾಪೇಕ್ಷಿ ಗಳಾಗಿ ಈ ಭಿಕ್ಷುಗಳು ಧಾವಿಸುತ್ತಿರುವರೆಂದು ಗೊತ್ತಾಯಿತು.

ಅವರು ಹೊಳೆ ದಾಟಿ ಹೋದ ಮೇಲೆ ಭಿಕ್ಷುಗಳ ಇನ್ನೊಂದು ಗುಂಪು ಬಂತು. ಅವರ ಹೆಜ್ಜೆಯಲ್ಲೆ ಮತ್ತೊಂದು. ಜನರೂ ಈ ಭಿಕ್ಷುಗಳ ಬೆನ್ನಹಿಂದೆ ಓಡ ತೊಡಗಿದರು. ಎಲ್ಲರ ಬಾಯಲ್ಲೂ ಬುದ್ಧನ ಮಹಾ ನಿರ್ವಾಣ ಕಾಲದ ಸುದ್ದಿಯೇ ಸುದ್ದಿ. ದಂಡಯಾತ್ರೆ ಅಥವಾ ಮಹಾರಾಜನ ಪಟ್ಟಾಭಿಷೇಕ ಮಹೋತ್ಸವಗಳನ್ನು ನೋಡಲು ನೆರೆವ ಜನರಂತೆ ಜನರು ಕೂಡತೊಡಗಿದರು. ಜೇನುಹುಟ್ಟಿಗೆ ಮುತ್ತುವ ಜೇನ್ನೊಣಗಳಂತೆ, ಅಯ ಸ್ಕಾಂತದೆಡೆ ಎಳೆಯಲ್ಪಡುವ ಕಬ್ಬಿಣದ ಚೂರುಗಳಂತೆ ಜನರು ತಂಡೋಪ ತಂಡವಾಗಿ ಆ ಮಹಾನಿರ್ವಾಣದ ಅದ್ಭುತ ಘಟನೆ ನಡೆವ ಸ್ಥಳಕ್ಕೆ, ಯುಗ ಪುರುಷನ ಅಮರತ್ವದ ಘಟನೆ ನೋಡುವುದಕ್ಕೆ, ಜನ ಪ್ರವಾಹ ಸಾಗಿತು.

ಆಗ, ಮರಣ ಶಯ್ಯೆಯಲ್ಲಿದ್ದ ಆ ಋಷಿಯ ಬಗ್ಗೆ ಸಿದ್ಧಾರ್ಥ ಬಹಳ ಯೋಚಿಸಿದ. ಬುದ್ಧನ ವಾಣಿಯಿಂದ ಸಾವಿರಾರು ಹೃದಯಗಳು ಜಾಗೃತ ಗೊಂಡಿವೆ. ಸಿದ್ಧಾರ್ಥನೂ ಒಮ್ಮೆ ಆ ದಿವ್ಯ ವಾಣಿಯನ್ನು ಆಲಿಸಿದ್ದ. ಅವನ ದೇದೀಪ್ಯಮಾನವಾದ ಮೊಗವನ್ನೂ ನೋಡಿ ಮಂತ್ರಮುಗ್ಧನಾಗಿದ್ದ. ಸಿದ್ಧಾರ್ಥ ಪ್ರೀತಿಯಿಂದಲೇ ಅವನ ನಾಮಸ್ಮರಣೆ ಮಾಡಿದ. ಉದ್ಧಾರದ ಅವನ ಮಾರ್ಗವನ್ನು ನೆನಸಿದ. ತಾನು ಯುವಕನಾಗಿದ್ದಾಗ ಆ ಪುರುಷೋ ತ್ತಮನೊಡನೆ ಆಡಿದ ಮಾತುಗಳು ಅವನ ಸ್ಮೃತಿಪಟಲಕ್ಕೆ ಬಂದುವು ತಾನು ಅಹಂಕಾರದಿಂದ ಹಾಗೂ ಅಕಾಲ ಬುದ್ಧಿಯಿಂದ ಹಾಗೆ ನುಡಿದೆ

ನೆಂಬೂ ಅವನಿಗೀಗ ತೋಚಿತು.

ಗೌತಮನ ಬೋಧೆಯನ್ನು ತಾನು ಸ್ವೀಕರಿಸಲಾಗದಿದ್ದರೂ ಗೌತಮನಿಂದ ತಾನು ಬೇರೆಯಾಗಿ ಹೋಗಿಲ್ಲ ಎಂಬ ಭಾವನೆ ಅವನ ಹೃದಯದಲ್ಲಿ ಉದಯಿಸಿದೆ. ಇಲ್ಲ,ನಿಜವಾದ ಸತ್ಯ ಶೋಧಕನು ಯಾವ ತತ್ವ ಬೋಧೆಯನ್ನೂ ಸ್ವೀಕರಿಸಲಾರ. ಆದರೆ ಶೋಧಿಸುವವನು ಪ್ರತಿಯೊಂದು ಮಾರ್ಗ ಅಥವಾ ಗುರಿಗೂ ತನ್ನ ಸಮ್ಮತಿ ಕೊಡಬಹುದು

## ೧೧ ನೆಯ ಅಧ್ಯಾಯ

ಗೌತಮ ಬುದ್ಧನ ಅಂತ್ಯ ದರ್ಶನಾಪೇಕ್ಷೆಯಿಂದ ಅಸಂಖ್ಯಾತ ಜನರು ಯಾತ್ರೆ ಹೊರಟಾಗ ಕಮಲಾ ಕೂಡಾ ಹೊರಟಳು.ಗಣಿಕೆಯರಲ್ಲೆಲ್ಲ ಅತ್ಯಂತ ಲಾವಣ್ಯ ರಮಣೀಮಣಿಯಾಗಿದ್ದ ಅವಳು ತನ್ನ ಹಿಂದಿನ ಜೀವನ ವ್ಯವಸಾಯವನ್ನು ತ್ಯಜಿಸಿದ್ದಳು. ತನ್ನ ಸುಂದರ ಉದ್ಯಾನವನವನ್ನು ಗೌತಮನ ಭಿಕ್ಷುಗಳಿಗೆ ಕಾಣಿಕೆಯಾಗಿ ಅರ್ಪಿಸಿದ್ದಳು. ಆ ಮಹಾನುಭಾವನ ತತ್ವಬೋಧೆಯ ಆಶ್ರಯಪಡೆದಳು. ಯಾತ್ರಿಕರ ಸೇವೆಯಲ್ಲೇ ಕಾಲ ಕಳೆಯುತಿದ್ದಳು. ಗೌತಮನ ಮಹಾ ನಿರ್ವಾಣದ ಗಳಿಗೆ ಸಮೀಪಿಸಿದೆಯೆಂದು ಕೇಳಿ, ಸಾದಾ ಬಟ್ಟೆಗಳನ್ನೇ ತೊಟ್ಟುಕೊಂಡು, ತನ್ನ ಮಗನೊಂದಿಗೆ ಕಾಲ್ನಡಿಗೆಯಲ್ಲೇ ಹೊರಟಳು.

ಮಾರ್ಗ ಮಧ್ಯೆ ಅವರು ಆ ನದಿಗೆ ಸಮೀಪಿಸಿದರು. ಆದರೆ ನಡೆದು ನಡೆದು ಆ ಬಾಲಕ ಬಳಲಿ ಬೆಂಡಾದ. ಮನೆಗೆ ಹಿಂತಿರುಗೋಣವೆಂದು ಹಠತೊಟ್ಟ. ಪ್ರಯಾಣ ನಿಲ್ಲಿಸಿ, ಎಲ್ಲಾದರೂ ಉಳಿದು, ವಿಶ್ರಾಂತಿ ಪಡೆಯಬೇಕಾಗಿತ್ತು. ಹಸಿವೆಯಿಂದಲೂ ಕಂಗೆಟ್ಟ. ಅನೇಕ ಸಲ ಸೆಟಗೊಂಡ. ಮುನಿಸು ತೋರಿದ. ಅಳಲೂ ಆರಂಭಿಸಿದ. ಆದುದರಿಂದ ಕಮಲಾ ಅಲ್ಲಲ್ಲಿ ತಂಗಿ ವಿಶ್ರಾಂತಿ ಪಡೆಯಲೇಬೇಕಾಯ್ತು. ತಾಯಿಯ ಮಾತನ್ನು ಅವನು ಕೇಳುತ್ತಿರಲಿಲ್ಲ. ಹೀಗಾಗಿ ಆಗಾಗ ಅವನನ್ನು ಅವಳು ಉಣಿಸಿ, ತಿನಿಸಿ

ಗದರಿಸಿ, ಸಂತೈಸಿ ಮುಂದೆ ಮುಂದೆ ಪ್ರಯಾಣ ಮಾಡುತಿದ್ದಳು. ಸಾಯುತ್ತಿರುವ ವಿಚಿತ್ರ ಮನುಷ್ಯನೊಬ್ಬನನ್ನು ಕಾಣಲು, ಅಸಿಶ್ಚಿತ ಸ್ಥಳಗಳಿಗೆಲ್ಲ ಈ ರೀತಿ ತನ್ನ ತಾಯಿ ಯಾತ್ರೆ ಮಾಡುವ ಕಾರಣವೇನೆಂದು ಅವನಿಗೆ ಅರ್ಥವಾಗುತ್ತಿರಲಿಲ್ಲ. "ಸಾಯುವವನು ಸಾಯಲಿ. ನಮಗೇನು ?" ಎಂದವನು ಕೇಳುತಿದ್ದ.

ಈ ಯಾತ್ರಿಕರಿಬ್ಬರೂ ವಾಸುದೇವನ ಕಡವಿನ ಸ್ಥಳಕ್ಕೆ ಇನ್ನೂ ಸ್ವಲ್ಪ ದೂರವಲ್ಲಿದ್ದಾಗಲೇ ಆಯಾಸದಿಂದ ಆ ಹುಡುಗ ಕುಳಿತುಬಿಟ್ಟ. ಕಮಲಾ ಕೂಡಾ ತುಂಬಾ ಬಳಲಿದ್ದಳು. ಆ ಬಾಲಕನು ಬಾಳೆಹಣ್ಣನ್ನು ತಿನ್ನುತಿದ್ದಾಗ ಅವಳು ಅಲ್ಲೇ ನೆಲವಲ್ಲಿ ಮಲಗಿ ಮುದುಡಿಕೊಂಡಳು. ಅರೆಕ್ಷಣವಲ್ಲಿ ಅವಳು ನೋವಿನಿಂದ ಕೂಗಿದಳು. ಹುಡುಗನೂ ಬೆಚ್ಚಿಬಿದ್ದ. ಅವಳ ಹತ್ತಿರ ಬಂದ. ಭಯದಿಂದ ಅವಳ ಮೋರೆ ನಿರ್ವಿಣ್ಣವಾಗಿತ್ತು. ಅವಳನ್ನು ಕಚ್ಚಿದ ಹಾವೊಂದು ಸರಸರನೆ ಹರಿದು ಹೋಯಿತು.

ಇಬ್ಬರೂ ಗಾಬರಿಯಿಂದ ಓಡುತ್ತ ಬಂದರು. ಕಡವಿನ ಬಾಗಿಲಿಗೆ ಬಂದಾಗ ಕಮಲಾ ಕುಸಿದು ಬಿದ್ದಳು ಮುಂದೆ ನಡೆಯಲು ಅವಳಿಂದಾಗಲಿಲ್ಲ. ಹುಡುಗ ಅವಳನ್ನು ಅಪ್ಪಿಕೊಂಡು, ಮುದ್ದಾಡುತ್ತ, ಗಟ್ಟಿಯಾಗಿ ಚೀರಿದ. ಅವಳೂ ಬೊಬ್ಬೆ ಎಬ್ಬಿಸಿದಳು. ಈ ಕೂಗು ಕಡವಿನಲ್ಲಿದ್ದ ವಾಸುದೇವನಿಗೆ ಕೇಳಿಸಿತು. ಅವನು ಅವರಿದ್ದಲ್ಲಿಗೆ ಧಾವಿಸಿದ. ಅಲ್ಲಿ ಬಂದ ಕೂಡಲೇ ಆ ಸ್ತ್ರೀಯನ್ನು ಎತ್ತಿಕೊಂಡು ದೋಣಿ ಇದ್ದಲ್ಲಿ ಹೋದ.

ಅವರೆಲ್ಲರೂ ವಾಸುದೇವನ ಗುಡಿಸಲನ್ನು ಮುಟ್ಟಿದರು. ಸಿದ್ಧಾರ್ಥ ಬೆಂಕಿ ಉರಿಸುತಿದ್ದ. ಮೊದಲು ಅವನ ದೃಷ್ಟಿ ಆ ಬಾಲಕನ ಮೇಲೆ ಬಿದ್ದಿತು. ಆ ಕೂಡಲೇ ಏನೋ ಒಂದು ವಿಚಿತ್ರ ಸ್ಮರಣೆ ಅವನಿಗುಂಟಾಯಿತು. ಆ ಮೇಲೆ ಅವನು ಆ ಸ್ತ್ರೀಯನ್ನು ನೋಡಿದ. ಅವಳನ್ನು ಕಂಡ ತಕ್ಷಣ ಅವನಿಗೆ ಗುರುತು ಹತ್ತಿತು. ಮೂರ್ಛೆ ಹೋಗಿದ್ದ ಅವಳನ್ನು ಎತ್ತಿಕೊಂಡೇ ವಾಸುದೇವ ಬರುತಿದ್ದ. ಆ ಬಾಲಕನು ತನ್ನ ಮಗನೆಂದೇ ಅವನು ಊಹಿಸಿದ. ಏಕೆಂದರೆ ಅವನ ಮುಖವು ತನ್ನಂತೆಯೇ ಇದೆಯೆಂದು ಅವನಿಗೆ ಹೊಳೆಯಿತು. ಅದರಿಂದ ಅವನು ಸ್ವಲ್ಪ ಉದ್ವೇಗಗೊಂಡ.

ಕಮಲೆಯ ಗಾಯವನ್ನು ತೊಳೆದರು. ಆದರೆ ಆಗಲೇ ಅದು ಕಪ್ಪಾ

ಅವನು ಮುಗುಳು ನಕ್ಕ. ಮತ್ತೆ ತನ್ನ ಕೈಯನ್ನೂ ಅವಳ ಕೈ ಮೇಲಿರಿಸಿದ.

ಅವಳೇ ನುಡಿದಳು: "ಹೌದು, ನನಗೆ ಗೊತ್ತಾಯಿತು. ನನಗೂ ಶಾಂತಿ ದೊರೆಯುತ್ತದೆ."

"ನಿನಗೂ ಲಭಿಸಿದೆ" ಎಂದು ಸಿದ್ಧಾರ್ಥ ಅವಳ ಕಿವಿಯಲ್ಲಿ ಪಿಸುಗುಟ್ಟಿದ.

ಕಮಲಾ ದೃಷ್ಟಿ ಹೊರಳಿಸದೆ ಅವನನ್ನೇ ನೋಡಿದಳು. ಗೌತಮನಿದ್ದಲ್ಲಿ ಯಾತ್ರೆ ಹೋಗಲು ಅವಳು ಬಯಸಿದ್ದಳು. ಆ ಪುರುಷೋತ್ತಮನ ಮುಖಕಮಲವನ್ನು ನೋಡಲು ಕಮಲಾ ಆತುರಳಿದ್ದಳು. ಅವನಿಂದ ಶಾಂತಿ ಪಡೆಯಲು ಇಚ್ಛಿಸಿದ್ದಳು. ಆದರೆ ಅದರ ಬದಲು ಅವಳು ಸಿದ್ಧಾರ್ಥನನ್ನು ಕಂಡಳು. ಅದೂ ಒಳ್ಳೆಯದೇ. ಏಕೆಂದರೆ, ಗೌತಮನನ್ನು ಕಂಡ ಹಾಗೇ ಅವಳಿಗೆ ಅನುಭವವಾಯಿತು. ಇದನ್ನು ಹೇಳಲು ಅವಳು ಬಯಸಿದಳು. ಆದರೆ ಅವಳ ನಾಲಿಗೆ ಸ್ವಾಧೀನವಿರಲಿಲ್ಲ. ಮೌನದಿಂದಲೇ ಅವನನ್ನು ಕಂಡಳು. ಅವಳ ಕಣ್ಣುಗಳು ಬಾಡಿದುವು. ಕೊನೆಗಾಲದ ಸಂಕಟವೂ ನಡುಕವೂ ಕಳೆದು ಹೋದ ಮೇಲೆ ಸಿದ್ಧಾರ್ಥ ಅವಳ ಕಣ್ಣೆವೆಗಳನ್ನು ಮುಚ್ಚಿದ.

ಅವಳ ಮೃತ ಮುಖವನ್ನೇ ನೋಡುತ್ತ ಅವನು ಬಹಳ ಹೊತ್ತಿನ ವರೆಗೆ ಕುಳಿತುಕೊಂಡ. ಅವಳ ಆ ಮುದಿಬಾಯಿ, ಮುದುಡಿದ ತುಟಿಗಳನ್ನು ನೋಡಿದ. ತನ್ನ ಯೌವ್ವನ ಕಾಲದಲ್ಲಿ ತಾನು ಆ ತುಟಿಗಳನ್ನು ಆಗ ತಾನೇ ಕೊಯ್ದ ಅಂಜೂರ ಹಣ್ಣಿಗೆ ಹೋಲಿಸಿದ್ದೆನೆಂದೂ ನೆನಪು ಮಾಡಿಕೊಂಡ. ಆ ಕಳೆಗುಂದಿದ ಮುಖವನ್ನೂ ಸುಕ್ಕಿದ ಚರ್ಮವನ್ನೂ ದೀರ್ಘ ಕಾಲದ ವರೆಗೆ ದಿಟ್ಟಿಸಿದ. ತನ್ನ ಮುಖವೂ ಈಗ ಅಷ್ಟೇ ವಿವರ್ಣವಾಗಿದೆ ಮತ್ತು ಸುಕ್ಕುಗಟ್ಟಿದೆಯಲ್ಲದೆ ಸತ್ತೂ ಹೋಗಿದೆಯೆಂದೂ ಭಾವಿಸಿದ. ಅವಳ ತುಟಿಗಳು ಕೊಯ್ದ ಅಂಜೂರದ ಹಣ್ಣಿನಂತಿದ್ದಾಗ ತನ್ನದೂ ಹಾಗೆಯೇ ಇತ್ತೆಂದು ಪರಿಭಾವಿಸಿದ.

ವಾಸುದೇವ ಅನ್ನ ಬೇಯಿಸಿದ್ದ. ಆದರೆ ಸಿದ್ಧಾರ್ಥ ಉಣಲಿಲ್ಲ. ಮಲಗಲು ಅವರಿಬ್ಬರೂ ನೆಲದ ಮೇಲೆ ಸ್ವಲ್ಪ ಒಣ ಹುಲ್ಲನ್ನು ಹಾಕಿ

ಅಣಿಗೊಳಿಸಿದರು. ವಾಸುದೇವನು ಅದರ ಮೇಲೆಯೇ ಮಲಗಿಕೊಂಡ. ಆದರೆ ಸಿದ್ಧಾರ್ಥ ಹೊರಗೆ ಹೋದ. ಗುಡಿಸಲಿನ ಹೊರಗೆ ಇಡೀ ರಾತ್ರಿ ಕುಳಿತು ತನ್ನ ಜೀವನವನ್ನೆಲ್ಲ ಮತ್ತೆ ಮತ್ತೆ ಮೆಲುಕು ಹಾಕಿದ. ಆಗಾಗ ಎದ್ದು ಮನೆಯ ಬಾಗಿಲಿನ ವರೆಗೂ ಬಂದು ಮಗು ಅಳುತ್ತದೋ ಏನೋ ಎಂದು ಕಿವಿಗೊಡುತ್ತಿದ್ದ.

ಬೆಳಿಗ್ಗೆ ಸೂರ್ಯೋದಯದ ಮೊದಲೇ ವಾಸುದೇವನಿಗೆ ಎಚ್ಚರವಾಯಿತು. ಅವನು ಸಿದ್ಧಾರ್ಥನಿದ್ದಲ್ಲಿ ಬಂದು, "ನೀನು ನಿದ್ದೆ ಮಾಡಲಿಲ್ಲವಲ್ಲ" ಎಂದ.

"ಇಲ್ಲ ವಾಸುದೇವಾ! ನಾನಿಲ್ಲಿ ಕುಳಿತು ಹರಿವ ನದಿಯ ಧ್ವನಿಯನ್ನು ಆಲಿಸುತ್ತಿದ್ದೆ. ಆತ್ಮ-ಪರಮಾತ್ಮ ಐಕ್ಯದ ಅನೇಕ ವಿಚಾರಗಳನ್ನು ನಾನು ಆಲೋಚಿಸುತ್ತಿದ್ದೆ" ಎಂದು ಸಿದ್ಧಾರ್ಥ ಉತ್ತರವಿತ್ತ.

"ಸಿದ್ಧಾರ್ಥ! ನೀನು ಬಹಳ ದುಃಖವನ್ನನುಭವಿಸಿರುವೆಯೇ. ಆದರೆ ಆ ವ್ಯಸನ ನಿನ್ನ ಹೃದಯದಲ್ಲಿ ಸ್ಥಿರವಾಗಿ ಉಳಿದಿಲ್ಲ"

"ಇಲ್ಲ. ಮಿತ್ರಾ, ನಾನು ಏಕೆ ವ್ಯಸನಪಡಬೇಕು? ಐಶ್ವರ್ಯ ಮತ್ತು ಸುಖವನ್ನನುಭವಿಸಿದ್ದ ನಾನು ಈಗ ಮೊದಲಿಗಿಂತಲೂ ಅಧಿಕ ಸುಖಿ ಮತ್ತು ಐಶ್ವರ್ಯವಂತನಾಗಿದ್ದೇನೆ. ನನ್ನ ಮಗ ನನಗೆ ದೊರಕಿದ."

"ನಿನ್ನ ಮಗನನ್ನು ನಾನೂ ಸ್ವಾಗತಿಸುತ್ತೇನೆ. ಈಗ ಮುಂದಿನ ಕೆಲಸ ಮುಗಿಸೋಣ, ಬಾ. ನನ್ನ ಹೆಂಡತಿ ಜೀವಬಿಟ್ಟ ಹಾಸಿಗೆಯಲ್ಲೇ ಕಮಲಾ ಕೂಡಾ ಪ್ರಾಣ ತೊರೆದಳು. ನನ್ನ ಹೆಂಡತಿಯ ಅಂತ್ಯವಿಧಿ ಮಾಡಿದ ಗುಡ್ಡದ ಮೇಲೆಯೇ ಕಮಲೆಗೂ ಚಿತೆ ಸಿದ್ಧಗೊಳಿಸೋಣ."

ಮಗು ಇನ್ನೂ ನಿದ್ರಿಸುತ್ತಿದ್ದಾಗಲೇ ಅವರಿಬ್ಬರೂ ಚಿತೆ ಅಣಿಗೊಳಿಸಿದರು.

# ೧೨ ನೆಯ ಅಧ್ಯಾಯ

ಬೆದರಿದ ಆ ಹುಡುಗ ಅಳುತ್ತಲೇ ದಹನ ಕ್ರಿಯೆಯಲ್ಲಿ ಭಾಗ ವಹಿಸಿದ. ತನ್ನ ಮಗನೆಂದು ಸಿದ್ಧಾರ್ಥ ಕರೆದುದನ್ನು ಆ ಚಿನ್ನ ಬಾಲಕ ಆಲಿಸಿದ. ವಾಸುದೇವನ ಗುಡಿಸಲಲ್ಲಿರಲು ಹೇಳಿದಾಗಲೂ ಅವನಿಗೆ ಭಯವೇ ಆಯಿತು. ಯಾವಾಗಲೂ ಸ್ಮಶಾನಗುಡ್ಡಕ್ಕೆ ತೆರಳಿ ಅಲ್ಲಿ ಕುಳಿತುಕೊಳ್ಳುತ್ತಿದ್ದ. ಅನೇಕ ದಿನಗಳ ವರೆಗೆ ಹೀಗೆಯೇ ಅವನು ತನ್ನ ಹೃದಯದ ಹೆಬ್ಬಾಗಿಲಿಗೆ ಬೀಗವಿಕ್ಕಿಕೊಂಡು, ಏನೋ ಚಿಂತೆ, ಎತ್ತಲೋ ದೃಷ್ಟಿಯಿಂದ ಕಾಲ ಕಳೆದ.

ಸಿದ್ಧಾರ್ಥ ಮಮತೆಯಿಂದಲೇ ಅವನನ್ನು ನಡೆಸಿಕೊಂಡ. ಅವನ ದುಃಖವನ್ನು ಅರಿತುಕೊಂಡು ಅವನಷ್ಟಕ್ಕೇ ಬಿಟ್ಟ. ತನ್ನ ಮಗನಿಗೆ ತಾನು ತಂದೆಯೆಂದು ಗೊತ್ತಿಲ್ಲ; ತಾನೂ ತಂದೆಯಂತೆ ಪ್ರೀತಿಸಲಾರೆನೆಂದೂ ಸಿದ್ಧಾರ್ಥನಿಗೆ ಹೊಳೆಯಿತು. ಹುಡುಗನ ಗುಣ ಶೀಲಗಳನ್ನೂ ಕಂಡ. ಹನ್ನೊಂದು ವರ್ಷದ ಆ ಹುಡುಗನನ್ನು ತಾಯಿ ಕೆಡಿಸಿದ್ದಳು. ಅವನ ಚಟಗಳೆಲ್ಲ ಶ್ರೀಮಂತರವು. ಉಣಲು ಉತ್ತಮ ಆಹಾರ ಬೇಕು. ಮಲಗುವ ಹಾಸಿಗೆಯೂ ಬಹಳ ಮೃದು ಇರಬೇಕು. ಸೇವಕರು ಬೇಕು. ಈ ಕೆಟ್ಟ ಅಭ್ಯಾಸಗಳುಳ್ಳ ಹಾಗೂ ಮಾತೃವಿಯೋಗದಿಂದ ದುಃಖಿಸುತ್ತಿರುವ ಹುಡುಗ ಅಪರಿಚಿತ ಸ್ಥಳದಲ್ಲಿ ಒಮ್ಮಿಂದೊಮ್ಮೆಯೇ ಸಂತೋಷದಿಂದ ಇರಲಾರ. ನಿಜ. ಆದುದರಿಂದ ಸಿದ್ಧಾರ್ಥ ಒತ್ತಾಯ ಮಾಡಲಿಲ್ಲ. ಅವನಿಗೆ ಒಳ್ಳೇ ಆಹಾರ ಕೊಡಲು ಯತ್ನಿಸಿದ. ಮೆಲ್ಲಮೆಲ್ಲಗೆ, ಸಹನೆಯಿಂದ, ಹುಡುಗನ ಪ್ರೀತಿ ಪಾತ್ರನಾಗಬಹುದೆಂದು ಅವನ ಆಶೆ.

ಬಾಲಕನು ಗುಡಿಸಲಿಗೆ ಬಂದಾಗ ತನ್ನ ಸಿರಿ ಸುಖಗಳು ಮರಳಿತೆಂದು ಭಾವಿಸಿದ್ದ. ಆದರೆ ಅದು ಬರಿ ಭ್ರಾಂತಿಯಾಗಿಯೇ ಪರಿಣಮಿಸಿತು. ದಿನಗಳೆದಂತೆ ಅವನ ಹಠಮಾರಿತನ, ಅವಿಧೇಯತೆ, ಮುದುಕರ ಮೇಲಿನ ತಿರ

ಸ್ಕಾರ ಬುದ್ಧಿ, ಹೆಚ್ಚು ಆಯಿತು. ವಾಸುವೇವನ ಹಣ್ಣಿನ ಮರಗಳನ್ನೇರಿ ಸ್ವೇಚ್ಛೆಯಿಂದ ತಿನ್ನಲೂ ಆರಂಭಿಸಿದ. ಸುಖಶಾಂತಿಗಳ ಬದಲು ದುಃಖ, ತೊಂದರೆಗಳೇ ಹೆಚ್ಚಾದುವೆಂದು ಸಿದ್ಧಾರ್ಥ ಕಂಡುಕೊಂಡ. ಆದರೂ ಸುತನ ಮೇಲಣ ಪ್ರೇಮದಿಂದ ದುಃಖವಾದರೂ ಚಿಂತಿಲ್ಲ, ಅವನಿಲ್ಲದ ಸುಖ ಬೇಡವೆಂದು ಅವನು ತರ್ಕಿಸಿದ.

ಸಿದ್ಧಾರ್ಥನ ಮಗ ಬಂದು ಅವರೊಡನೆ ವಾಸಿಸಲಾರಂಭಿಸಿದ ಬಳಿಕ ಇಬ್ಬರೂ ಮುದುಕರು ದಿನನಿತ್ಯದ ಕೆಲಸವನ್ನು ಪಾಲು ಮಾಡಿಕೊಂಡರು. ವಾಸುದೇವ ನದಿಗೆ ಹೋದ. ತನ್ನ ಮಗನೊಂದಿಗಿರಲು ಸಿದ್ಧಾರ್ಥ ಮನೆಗೆಲಸ, ಗದ್ದೆಗೆಲಸಗಳಲ್ಲಿ ನಿರತನಾದ.

ತನ್ನ ಮಗನ ನಡತೆ ಬದಲಾದೀತು, ತನ್ನನ್ನು ತಂದೆಯೆಂದು ಪರಿಗಣಿಸಿ ಪ್ರೀತ್ಯಾದರಗಳಿಂದ ಅವನು ನಡೆದುಕೊಳ್ಳಬಹುದೆಂದು ಸಿದ್ಧಾರ್ಥ ಅನೇಕ ತಿಂಗಳುಗಳ ವರೆಗೂ ಸೈರಿಸಿದ. ಮಗನು ಏನು ಮಾಡಿದರೂ ಶಾಂತನಾಗಿಯೇ ಇದ್ದ. ಒಂದು ದಿನ ಹುಡುಗ ತಂದೆಯನ್ನು ಬಹಳ ಕಾಡಿಸಿದ. ಸಿಟ್ಟಿನಿಂದ ತಂದೆಗೇ ಇದಿರಾಡಿದ, ಅನ್ನ ಬೇಯಿಸುವ ಎರಡು ಮಡಿಕೆಗಳನ್ನು ಒಡೆದ. ಇದನ್ನು ಕಂಡ ವಾಸುದೇವ ಅದೇ ದಿನ ಸಂಜೆ ತನ್ನ ಮಿತ್ರನನ್ನು ದೂರ ಕರೆದು ಹೇಳಿದ :

"ನಾನು ಏನಾದರೂ ಹೇಳಿದರೆ ಬೇಸರಪಡಬೇಡ. ನಾನು ನಿನ್ನ ಮಿತ್ರನಾದುದರಿಂದ ಕೆಲವು ಮಾತುಗಳನ್ನು ಹೇಳುತ್ತೇನೆ. ನೀನು ಬಹಳ ಚಿಂತೆ ದುಃಖ ಮಾಡುತ್ತಿರುವಂತೆ ತೋರುತ್ತದೆ. ನಿನ್ನ ಮಗ ನಿನ್ನನ್ನೂ ನನ್ನನ್ನೂ ಬಹಳ ಕಾಡಿಸುತ್ತಾನೆ. ಈ ಹಕ್ಕಿಯ ಮರಿಯ ಗೂಡೇ ಬೇರೆ. ಅವನ ಜೀವನ ಪದ್ಧತಿಯೇ ಭಿನ್ನ. ನಗರದ ಐಶ್ವರ್ಯ ಸುಖಗಳ ಮೇಲೆ ಬೇಸತ್ತು ನಿನ್ನಂತೆ ಅವನು ಓಡಿ ಬಂದವನಲ್ಲ. ಒತ್ತಾಯಕ್ಕೊಳಗಾಗಿ ಬಂದಿದ್ದಾನೆ. ಮಿತ್ರಾ, ನಾನು ಅನೇಕ ಸಲ ನದಿಯನ್ನೇ ಪ್ರಶ್ನಿಸಿದೆ. ಅದು ನಕ್ಕಿತು. ನನ್ನ ಮತ್ತು ನಿನ್ನ ಹುಚ್ಚುತನಕ್ಕೇ ನಕ್ಕಿತು. ನೀರು ಹರಿದು ನೀರನ್ನೇ ಕೂಡಿಕೊಳ್ಳುತ್ತದೆ. ಯೌವನ, ಜವ್ವನಿಕೆಯ ಮಿಲನವನ್ನೇ ಅಪೇಕ್ಷಿಸುತ್ತದೆ. ಇಲ್ಲಿದ್ದರೆ ನಿನ್ನ ಮಗನಿಗೆ ಸುಖವಿಲ್ಲ. ನದಿಯನ್ನೇ ಕೇಳು."

ದುಃಖದಿಂದ ಸಿದ್ಧಾರ್ಥ ತನ್ನ ಮಿತ್ರ ವಾಸುದೇವನ ವದನಾಮುಖ

ವನ್ನು ನೋಡಿದ. ಸುಕ್ಕುಗಟ್ಟಿದ ಆ ಮೋರೆಯಲ್ಲಿ ಒಂದೊಂದು ನೆರಿಗಳು ಒಂದೊಂದು ಸದ್ಗುಣದ ದ್ಯೋತಕಗಳಾಗಿದ್ದುವು. ಸಿದ್ಧಾರ್ಥ ಮೆಲ್ಲಗೆ ಮರುನುಡಿದ :

"ಅವನನ್ನು ಅಗಲಿ ಹೇಗಿರಲಿ? ಮಿತ್ರಾ, ಇನ್ನು ಸ್ವಲ್ಪ ಸಮಯ ನೋಡೋಣ. ಅವನನ್ನು ತಿದ್ದಲು ನಾನು ಯತ್ನಿಸುತಿದ್ದೇನೆ. ಅವನ ಅಂತಃ ಕರಣ ಮುಟ್ಟಲು ನನ್ನ ಯತ್ನ. ಪ್ರೇಮ, ಸಹನೆಗಳಿಂದ ಅವನನ್ನು ಗೆಲ್ಲುವೆ. ಈ ನದಿಯೂ ಅವನೊಡನೆ ಮಾತನಾಡಬಹುದು. ಅವನಿಗೂ ಕರೆ ಬಂದಿದೆ."

ವಾಸುದೇವ ನಕ್ಕ. "ಹೌದು, ಅವನಿಗೂ ಕರೆ ಬಂದಿದೆ. ಅವನೂ ಈ ಅಮರ ಜೀವನದ ಒಂದಂಶ. ಆದರೆ ಅವನಿಗೆ ಯಾವ ಕರೆ ಬಂದಿದೆ ಯೆಂದು ನನಗಾಗಲೀ ನಿನಗಾಗಲೀ ಗೊತ್ತಿದೆಯೇನು? ಅವನದು ಯಾವ ದಾರಿ, ಯಾವ ಕಾರ್ಯ, ಯಾವ ಸುಖದುಃಖಗಳೆಂದು ತಿಳಿದಿದೆಯೇ? ಅವನು ಬಹಳ ದುಃಖ ಪಡಲಿರುವಂತೆ ತೋರುತ್ತದೆ. ತುಂಬಾ ಅಹಂಕಾರಿ, ಹಠ ಮಾರಿ ಬಹಳ ಕಷ್ಟ, ಅನೇಕ ತಪ್ಪು, ಅಮಿತ ಅನ್ಯಾಯ, ವಿಶೇಷ ಪಾಪ ಗಳನ್ನು ಮಾಡುವುದರಲ್ಲಿ ಸಂದೇಹವಿಲ್ಲ. ನಿನ್ನ ಮಗನನ್ನು ನೀನು ತಿದ್ದಲು ಬಯಸುವೆಯಾ ? ನಿನಗೆ ವಿಧೇಯನಾಗಿದ್ದಾನೇನು ? ನೀನು ಅವನಿಗೆ ಹೊಡೆಯುತ್ತೀಯಾ ? ಶಿಕ್ಷೆ ಕೊಡುತ್ತೀಯಾ ?"

"ಇಲ್ಲ, ವಾಸುದೇವ. ಹಾಗೇನನ್ನೂ ಮಾಡುವುದಿಲ್ಲ."

"ನನಗೆ ಗೊತ್ತಿತ್ತು. ನೀನು ಅವನನ್ನು ಬಿಗಿಯಾಗಿ ನಡೆಸಿಕೊಂಡಿಲ್ಲ. ಶಿಕ್ಷಿಸುವುದಿಲ್ಲ. ಬೆದರಿಸುವುದಿಲ್ಲ. ಏಕೆಂದರೆ ಕಾಠಿಣ್ಯಕ್ಕಿಂತ ಮೃದುತ್ವವೇ ಒಳ್ಳೇದು, ಬಂಡೆಗಲ್ಲಿಗಿಂತ ನೀರೇ ಗಟ್ಟಿ, ಹಿಂಸೆಗಿಂತ ಪ್ರೇಮವೇ ಬಲಿಷ್ಠ ಎಂದು ನಿನ್ನ ಭಾವನೆ. ಒಳ್ಳೇದು. ನಿನ್ನ ಆ ಸದ್ಭಾವನೆಗಳು ಮೆಚ್ಚತಕ್ಕಂತ ವುಗಳೇ. ಆದರೆ ಬಿಗಿಯಾಗಿ ನಡೆಸಿಕೊಳ್ಳದೇ ಇರುವುದೂ ಶಿಕ್ಷಿಸದೇ ಇರು ವುದೂ ನಿನ್ನ ತಪ್ಪಾಗಿರಲಿಕ್ಕಿಲ್ಲವೇ ? ನೀನು ನಿನ್ನ ಪ್ರೇಮದಿಂದ ಅವನನ್ನು ಬಂಧಿಸಿದ ಹಾಗೆ ತೋರುತ್ತದೆ. ನಿನ್ನ ಸದ್ಗುಣ, ಸೈರಣೆಗಳಿಂದ ಅವನಿಗೇ ಲಜ್ಜೆಯೆನಿಸುತ್ತದೆ. ಅವು ಅವನಿಗೇ ದೊಡ್ಡ ಕಷ್ಟಗಳಾಗಿ ಪರಿಣಮಿಸಿವೆ. ಈ ಅಹಂಕಾರಿ, ಕೆಟ್ಟ ಹುಡುಗ ಎರಡು ಬಾಳೆಹಣ್ಣುಗಳಿಂದ ಬದುಕುವ

ನಮ್ಮಂತವರ ಗುಡಿಸಲಲ್ಲಿದ್ದಾನೆ ನಮಗೆ. ಹೊಟ್ಟೆ ತುಂಬ ಅನ್ನ ಸಿಗುವುದೇ ಪ್ರಯಾಸ. ನಮ್ಮ ವಿಚಾರಗಳೂ ಅವನಿಗಿಂತ ಭಿನ್ನ. ನಾವೂ ಮುದುಕರು. ಶಾಂತರು. ಇದರಿಂದ ಅವನನ್ನು ಬಂಧಿಸಿಟ್ಟಂತಾಗಲಿಲ್ಲವೇ ? ಅವನನ್ನು ಶಿಕ್ಷೆಗೊಳಪಡಿಸಿದಂತಾಗಲಿಲ್ಲವೇ ?"

ಸಿದ್ಧಾರ್ಥ ತತ್ತರಿಸಿ ತಲೆ ಕೆಳಗೆ ಹಾಕಿದ. "ಹಾಗಾದರೆ ನಾನು ಏನು ಮಾಡಲಿ ?'' ಎಂದೂ ಕೇಳಿದ.

ಅವನನ್ನು ನಗರಕ್ಕೆ ಕರೆದು ಕೊಂಡು ಹೋಗು. ಅವನು ಅವನ ತಾಯಿ ಇದ್ದ ಮನೆಗೇ ಮರಳಲಿ. ಅವಳ ದಾಸದಾಸಿಯರು ಇನ್ನೂ ಇರಬಹುದು. ಅವರಿಲ್ಲದಿದ್ದರೆ ಯಾವ ಗುರುಕುಲಕ್ಕಾದರೂ ಕಳಿಸು. ವಿದ್ಯೆ ಪಡೆಯ ಬೇಕೆಂದಲ್ಲ. ಅಲ್ಲಿ ಇನ್ನಿತರ ಹುಡುಗರೂ ಹುಡುಗಿಯರೂ ಇರುವುದರಿಂದ ಅವನಿಗೆ ಸಂತೋಷವಾಗುತ್ತದೆ. ಅವನು ಪ್ರಾಪಂಚಿಕ ಮನುಷ್ಯ. ನೀನ ದನ್ನು ಯೋಚಿಸಲಿಲ್ಲವೇ ?"

ಸಿದ್ಧಾರ್ಥ ದುಃಖದಿಂದ ಹೇಳಿದ: "ಮಿತ್ರಾ! ನನ್ನ ಮನಸ್ಸಿನಲ್ಲಿದ್ದು ದನ್ನು ನೀನು ತಿಳಿದುಕೊಂಡಿರುತ್ತೀ. ನಾನೂ ಇದನ್ನೇ ಅನೇಕ ಸಲ ಯೋಚಿ ಸಿದ್ದೆ. ಆದರೆ ಇಷ್ಟು ಕಠೋರ ಹೃದಯವುಳ್ಳವನು ಈ ಪ್ರಪಂಚದಲ್ಲಿ ಹೇಗೆ ಬಾಳುವೆ ಮಾಡುತ್ತಾನೋ ? ತಾನೇ ಎಲ್ಲರಿಗಿಂತ ಶ್ರೇಷ್ಠನೆಂದು ಭಾವಿಸ ಲಾರನೇ ? ಇಂದ್ರಿಯ ಸುಖದಲ್ಲೇ ಮುಳುಗಿ ಹೋಗಲಾರನೇ ? ತಂದೆ ಮಾಡಿದ ತಪ್ಪುಗಳನ್ನೆಲ್ಲ ತಾನು ಮಾಡಲಾರನೇ ? ಸಂಸಾರದಲ್ಲಿ ಅವನು ಬಿದ್ದು ಹೋಗಲಾರನೇ ?"

ವಾಸುದೇವ ಪುನಃ ನಗತೊಡಗಿದ. ಸಿದ್ಧಾರ್ಥನ ಭುಜ ಹಿಡಿದು ಹೇಳಿದ:"ಮಿತ್ರಾ, ನೀನು ನದಿಯನ್ನೇ ಕೇಳು! ಅದರ ಉತ್ತರವನ್ನೇ ಆಲಿಸು! ನಿನ್ನ ಮಗನನ್ನು ಕಾಪಾಡುವುದಕ್ಕಾಗಿ ನೀನು ತಪ್ಪುಗಳನ್ನು ಮಾಡುತ್ತಿರು ವೆಯಾ? ಸಂಸಾರದಿಂದ ನಿನ್ನ ಮಗನನ್ನು ತಿರುಗಿಸಲು ನಿನ್ನಿಂದ ಸಾಧ್ಯವೇ? ಶಿಕ್ಷಣ, ಪ್ರಾರ್ಥನೆ, ಬುದ್ಧಿವಾದದಿಂದ ಹಾಗೆ ಮಾಡಲಾದೀತೇ? ಬ್ರಾಹ್ಮಣ ಪುತ್ರ ಸಿದ್ಧಾರ್ಥನ ಕಥೆಯನ್ನು ನೀನೊಮ್ಮೆ ನನಗೆ ಹೇಳಿರುವೆಯಲ್ಲ ! ಸಂಸಾರ, ಪಾಪ, ಲೋಭ, ಹುಚ್ಚುತನಗಳಿಂದ ಸಿದ್ಧಾರ್ಥನನ್ನು ಯಾರು ಕಾಪಾಡಿದರು ಹೇಳು. ಅವನ ತಂದೆಯ ಪಾವಿತ್ರ್ಯ, ಗುರುಬೋಧೆ, ಸ್ವಂತ

ಜ್ಞಾನ, ಸ್ವಸಾಧನೆಗಳು ರಕ್ಷಿಸಿದುವೇ ಹೇಗೆ? ತನ್ನ ಬಾಳುವೆಯನ್ನು ಬಾಳಲು, ಜೀವನದ ಕೆಸರಲ್ಲಿ ಹೊರಳಲು, ಪಾಪದ ಹೊರೆಯನ್ನು ಹೊರಲು, ವಿಷ ಕುಡಿಯಲು, ತನ್ನ ದಾರಿಯನ್ನು ಹುಡುಕಲು ಯಾವ ತಂದೆ, ಗುರು ಅವನಿಗೆ ಹೇಳಿದರು? ಪ್ರಾಯಶಃ ನಿನ್ನ ಮಗನೂ ದುಃಖ ಹತಾಶೆಗಳನ್ನು ಅನುಭವಿಸದಂತೆ ತಡೆಯಲು ನಿನ್ನ ಇಚ್ಛೆ. ಆದರೆ ಅವನಿಗಾಗಿ ನೀನು ಏಳೇಳು ಜನ್ಮ ಧರಿಸಿ ಬಂದರೂ ಅವನ ಅದೃಷ್ಟವನ್ನು ಎಳ್ಳಷ್ಟು ಬದಲಿಸಲು ಶಕ್ಯವಿಲ್ಲ."

ವಾಸುದೇವ ಹಿಂದೆಂದೂ ಇಷ್ಟು ಮಾತನಾಡಿರಲಿಲ್ಲ. ಸಿದ್ಧಾರ್ಥ ಅವನನ್ನು ವಂದಿಸಿ, ದುಃಖದಿಂದ ಗುಡಿಸಲಿಗೆ ಹೋದ. ಅವನ ಕಣ್ಣಿಗೆ ಜೊಂಪು ಹತ್ತಲಿಲ್ಲ. ಅವನು ಯೋಚಿಸದ ಅಥವಾ ಅರಿಯದ ಹೊಸ ವಿಷಯವನ್ನೇನೂ ವಾಸುದೇವ ಹೇಳಿರಲಿಲ್ಲ. ಆದರೆ ಜ್ಞಾನಕ್ಕಿಂತ ಮಗನ ಮೇಲಿನ ಮೋಹವೇ ಹೆಚ್ಚಾಗಿದೆ. ಅವನನ್ನು ಕಳೆದುಕೊಳ್ಳುತ್ತೇನಲ್ಲ ಎಂಬ ಭಯ ಬೇರೆ. ಇಷ್ಟರ ವರೆಗೆ ಅವನು ಯಾರನ್ನೂ ಇಷ್ಟು ಅಂತಃಕರಣದಿಂದ, ಅಂಥ ಶ್ರದ್ಧೆಯಿಂದ, ಸಂತೋಷದಿಂದ ಪ್ರೇಮಿಸಿರಲಿಲ್ಲ.

ತನ್ನ ಮಿತ್ರನ ಸಲಹೆಗೆ ಸಿದ್ಧಾರ್ಥ ಕಿವಿಗೊಡಲಿಲ್ಲ. ಮಗನನ್ನು ಅಗಲಿರಲು ಅವನಿಗೆ ಅಸಾಧ್ಯ. ಹೀಗಾಗಿ ಹುಡುಗನ ದರ್ಪದ ಮಾತನ್ನು ತಾನೇ ಆಲಿಸಿದ. ಮಾತು ಮೀರಿದರೂ ಏನೂ ಮಾಡಲಿಲ್ಲ. ಮೌನ ತಾಳಿದ. ಸಹಿಸಿದ, ಸ್ನೇಹ ಮತ್ತು ಸಹನೆಯಿಂದಲೇ ವರ್ತಿಸಿದ. ವಾಸುದೇವ ಕೂಡಾ ಸ್ನೇಹ ಸಹನೆಗಳಿಂದಲೇ ನಡೆದುಕೊಂಡ. ಅವರು ಇಬ್ಬರೂ ಸಹನಾ ಮೂರ್ತಿಗಳು.

ಒಮ್ಮೆ ಮಗನ ಮುಖ ನೋಡಿ ಸಿದ್ಧಾರ್ಥ ಕಮಲೆಯನ್ನು ಸ್ಮರಿಸಿದ. "ನೀನು ಪ್ರೇಮಿಸಲಾರೆ" ಎಂದು ಅವಳು ಆಡಿದ್ದ ನುಡಿಗಳೂ ಅವನ ನೆನಪಿಗೆ ಬಂದುವು. ಅದು ನಿಜವೆಂದು ಅವನೂ ಒಪ್ಪಿದ್ದ. ತಾನೊಂದು ತಾರೆಯೆಂದೂ ಉಳಿದವರೆಲ್ಲ ಉದುರುವ ಎಲೆಗಳೆಂದೂ ಅವನು ಹೋಲಿಸಿಕೊಂಡಿದ್ದ. ಆದರೂ ಆವು ಸ್ವಲ್ಪ ಹಂಗಿಸುವ ಮಾತುಗಳೆಂದು ಅವನು ಈಗ ಅರ್ಥಮಾಡಿಕೊಂಡ.

ತನ್ನನ್ನು ತಾನು ಮರೆಯುವಷ್ಟು ಯಾರನ್ನೂ ಅವನು ಪ್ರೀತಿಸಿಲ್ಲವೆಂ

ಬುದೇನೋ ನಿಜ. ಇನ್ನೊಬ್ಬರ ಮೇಲೆ ಅವನು ಪ್ರೇಮದಿಂದ ಹುಚ್ಚಾಗಿಲ್ಲ. ಅದು ಅವನಿಂದ ಸಾಧ್ಯವಾಗಲೂ ಇಲ್ಲ. ಸಾಮಾನ್ಯ ಜನರಿಗೂ ತನಗೂ ಇದೇ ಅಂತರ ಎಂದು ಅವನು ಭಾವಿಸಿದ್ದ. ಆದರೆ ಈ ಮಗನು ಬಂದ ಬಳಿಕ ದುಃಖ, ಮಮತೆಗಳಿಂದ ಅವನೂ ಸಾಮಾನ್ಯ ಜನರಂತೆಯೇ ಆಗಿದ್ದಾನೆ. ಹುಚ್ಚಾಗುವಷ್ಟು ಪ್ರೇಮ! ಪ್ರೇಮದ ಹುಚ್ಚು! ಈ ಜೀವನದಲ್ಲಿ ಈಗಲಾದರೂ ಒಮ್ಮೆ ವಿಚಿತ್ರ ಹಾಗೂ ಅತ್ಯಂತ ಬಲವಾದ ಸುತನ ಮೇಲಿನ ಮೋಹದ ಅನುಭವಕ್ಕೊಳಗಾದ. ಅದರಿಂದ ತುಂಬಾ ಕಷ್ಟಪಟ್ಟ. ಆದರೂ ತಾನು ಸುಖದ ಸಿರಿಯ ಸೋಪಾನವನ್ನೇರುತ್ತಿರುವೆನೆಂದು ಆನಂದಿಸಿದ.

ಈ ಪ್ರೇಮ, ಈ ಅಂಥ ಅನುರಾಗ, ಮಾನವೀ ಮೋಹವೇ. ಇದು ಸಂಸಾರ. ಇದು ಆಳವಾದ ನೀರಿನ ಸೆಲೆ. ಇದು ನಿಷ್ಪ್ರಯೋಜಕವಲ್ಲ. ಇದು ಆವಶ್ಯಕ. ಇದು ಪ್ರಕೃತಿ. ಈ ಭಾವನಾತಿರೇಕ, ಸಂಕಟ, ಹುಚ್ಚುತನಗಳನ್ನೆಲ್ಲ ಅನುಭವಿಸಿಯೇ ತೀರಬೇಕು.

ಈ ಮಧ್ಯೆ ಅವನ ಮಗ ನಾನಾ ಹುಚ್ಚು ಕೆಲಸಗಳನ್ನು ಮಾಡಿದ. ತನ್ನ ತಿನಿಸು ಮುನಿಸುಗಳಿಂದ ತಂದೆಯನ್ನು ಲಜ್ಜೆಗೊಳಿಸಿದ. ಅವನನ್ನು ಆಕರ್ಷಿಸುವಂತಹುದು ತಂದೆಯಲ್ಲೇನೂ ಇಲ್ಲ. ತಂದೆಯ ಭಯವೂ ಇಲ್ಲ. ಈ ತಂದೆ ಸದ್ಗುಣಿ. ದಯಾವಂತ. ಪುಣ್ಯಾತ್ಮ. ಆದರೆ ಅವು ಹುಡುಗನನ್ನು ಒಲಿಸುವ ಗುಣಗಳೇನೂ ಅಲ್ಲ. ಇಂತಹ ಮುರುಕು ಗುಡಿಸಲಿನಲ್ಲಿ ತಾನು ವಾಸವಾಗಿರುವಂತೆ ಒತ್ತಾಯ ಮಾಡುತ್ತಿರುವ ತನ್ನ ತಂದೆಯ ಮೇಲೆ ಅವನಿಗೆ ಬೇಸರ. ನಿಂದಿಸಿದರೆ ನಗುತ್ತಾನೆ! ಅವಮಾನಿಸಿದರೆ ಸ್ನೇಹ ತೋರುತ್ತಾನೆ! ತುಂಟತನ ಮಾಡಿದರೂ ದಯೆಯೇ! ಇದೆಲ್ಲ ನರಿ ಕುತಂತ್ರ! ಗದರಿಸಿ ಬೆದರಿಸುತಿದ್ದರೇ ಅವನಿಗೆ ಹೆಚ್ಚು ಪ್ರಿಯವಾಗುಲಿತ್ತು.

ಒಂದು ದಿನ ತಂದೆಯ ಮಾತನ್ನು ಖಂಡಿಸಿ, ಇದಿರಾಡಿಯೇ ಬಿಟ್ಟ. ಸೌದೆ ಒಟ್ಟುಗೂಡಿಸಬೇಕೆಂದು ಸಿದ್ಧಾರ್ಥ ಹೇಳಿದ್ದ. ಆದರೆ ಹುಡುಗ ಗುಡಿಸಲಿನಿಂದ ಹೊರಗೆ ಕಾಲಿಡಲಿಲ್ಲ. ತಂದೆಯ ಮಾತನ್ನು ಧಿಕ್ಕರಿಸಿ, ನೆಲ ತುಳಿದು, ಮುಷ್ಠಿ ತೋರಿಸುತ್ತ ತಾತ್ಸಾರದಿಂದ ನುಡಿದ:

"ನೀನೇ ತಾ. ನಾನು ನಿನ್ನ ಆಳಲ್ಲ. ನೀನು ನನ್ನನ್ನು ಹೊಡೆಯುವುದಿಲ್ಲ ಎಂದು ನನಗೆ ಗೊತ್ತಿದೆ. ನಿನಗಷ್ಟು ಧೈರ್ಯವೂ ಇಲ್ಲ. ಆದರೆ

ನಿನ್ನ ದೈವಭಕ್ತಿ, ಮಮತೆಗಳಿಂದ ನನ್ನನ್ನು ಕೀಳು ಮಾಡಿ ಸಾಕಷ್ಟು ಶಿಕ್ಷೆ ಕೊಡುತಿದ್ದೀಯಲ್ಲ! ನಿನ್ನ ಹಾಗೆ ನಾನೂ ಸದ್ಗುಣಿ, ಸದಾಚಾರಿ, ಪರಮ ಪವಿತ್ರನಾಗಬೇಕೆಂದು ನಿನ್ನ ಇಚ್ಛೆ. ಥೂ, ನಿನ್ನಂತಹ ಮನುಷ್ಯನಾಗುವ ದಕ್ಕಿಂತ ಕಳ್ಳ, ಸುಳ್ಳ, ಕೊಲೆಗಡಕನಾಗುವುದು ಲೇಸು. ನಿನ್ನನ್ನು ನಾನು ದ್ವೇಷಿಸುತ್ತೇನೆ. ನೀನು ನನ್ನ ತಂದೆಯಂತೆ, ತಂದೆ!"

ಈ ರೀತಿ, ದುಃಖ ಕೋಪಾತಿಶಯಗಳಿಂದ ಹಿಂದು ಮುಂದಿನ ವಿಚಾರ ವಿಲ್ಲದೆ ಬೈಗಳ ಮಳೆ ಸುರಿಸಿದ. ಆ ಮೇಲೆ ಅಲ್ಲಿ ನಿಲ್ಲದೆ ಓಡಿ ಹೋದ. ಮನೆಗೆ ಹಿಂತಿರುಗುವಾಗ ಬಹಳ ರಾತ್ರಿಯಾಗಿತ್ತು.

ಮುಂಜಾನೆ ಅವನು ಮನೆಯಲ್ಲಿರಲಿಲ್ಲ. ಕಡವಿನ ಹಣವನ್ನು ತುಂಬಿಸಿಟ್ಟಿದ್ದ ಒಂದು ಸಣ್ಣ ಕುಕ್ಕೆಯೂ ಇರಲಿಲ್ಲ. ದೋಣಿಯೂ ನಾಪತ್ತೆ. ನದಿಯ ಆಚೆಯ ದಡದಲ್ಲಿ ಅದು ತೇಲುತಿದ್ದುದನ್ನು ಸಿದ್ಧಾರ್ಥ ಕಂಡ. ಬಾಲಕ ಎಲ್ಲೋ ಪಲಾಯನವ್ರತ ಕೈಕೊಂಡಿರುವನೆಂದು ಅವನಿಗೆ ಖಚಿತವಾಯಿತು.

ಹಿಂದಿನ ದಿನ ಆ ಹುಡುಗ ಬಾಯಿಗೆ ಬಂದಂತೆ ಬೈದುದನ್ನು ಕೇಳಿದ ಮೇಲೆ ಸಿದ್ಧಾರ್ಥ ಸಂಕಟಪಡುತಿದ್ದ. ಈಗಂತೂ ಅವನ ದುಃಖಕ್ಕೆ ಪಾರ ವಿರಲಿಲ್ಲ. "ನಾನು ಅವನ ಬೆನ್ನ ಹಿಂದೆ ಹೋಗಲೇ ಬೇಕು. ಮಗು ಕಾಡಿನಲ್ಲಿ ಒಬ್ಬಂಟಿಗನೇ ಹೋಗಲಾರ. ಏನಾದರೂ ಅಪಾಯ ಸಂಭವಿಸೀತು ವಾಸುದೇವಾ! ನದಿ ದಾಟಲು ಒಂದು ತೆಪ್ಪವನ್ನಾದರೂ ಮಾಡೋಣ" ಎಂದವನು ಚಡಪಡಿಸಿದ.

ವಾಸುದೇವ ಹೇಳಿದ : "ನಮ್ಮ ದೋಣಿಯನ್ನು ಪುನಃ ತರಲು ನಾವು ಒಂದು ತೆಪ್ಪ ಮಾಡೋಣ. ಆದರೆ ಆ ಹುಡುಗನ ವಿಚಾರ ಬಿಟ್ಟು ಬಿಡು; ಅವನು ಹೋಗಲಿ. ಅವನಿನ್ನು ಸಣ್ಣ ಕೂಸಲ್ಲ. ತನ್ನನ್ನು ತಾನು ನೋಡಿಕೊಳ್ಳಲು ಅವನು ಬಲ್ಲ. ಅವನು ನಗರದ ದಾರಿ ಹುಡುಕಿರಬೇಕು. ಅದು ಸರಿ. ನೀನು ಮಾಡಲು ತಪ್ಪಿದುದನ್ನು ಅವನು ಸ್ವತಃ ಮಾಡುತಿದ್ದಾನೆ. ತನ್ನ ದಾರಿ ತಾನೇ ಹಿಡಿಯಲು ಅವನ ಯತ್ನ. ಸಿದ್ಧಾರ್ಥ! ನೀನು ದುಃಖಿಸುತ್ತಿರುವಿಯಲ್ಲ! ಯಾವ ನೋವಿಗಾಗಿ ನೀನು ನಗಬೇಕಾಗಿದೆಯೋ ಅದನ್ನು ಬಿಟ್ಟು ಅಳುತ್ತಿರುವೆಯಲ್ಲ! ಇನ್ನು ಮುಂದಾದರೂ ನೀನು ನ್ನು ನೆನಸಿ ನಗದೇ ಇರಲಾರೆ, ನೋಡು.''

ಸಿದ್ಧಾರ್ಥ ಉತ್ತರವನ್ನೀಯಲಿಲ್ಲ. ಕೈ ಕೊಡಲಿ ತಂದು ಬಿದಿರಿನಿಂದ ಒಂದು ತೆಪ್ಪ ಕಟ್ಟಲು ಆರಂಭಿಸಿದ. ವಾಸುದೇವ ಹುಲ್ಲಿನ ಹಗ್ಗ ತಂದು ಬಿದಿರುಗಳನ್ನೆಲ್ಲ ಒಂದಕ್ಕೊಂದು ಬಿಗಿದ. ಆ ಮೇಲೆ ನದಿಗೆ ಅದನ್ನು ಇಳಿಸಿ, ಇಬ್ಬರೂ ಅದರ ಮೇಲೇರಿ ಹುಟ್ಟು ಹಾಕಿದರು. ನೀರು ತೆಪ್ಪವನ್ನು ಬಹಳ ಕೆಳಗೆ ಕೊಚ್ಚಿಕೊಂಡು ಹೋಯಿತು. ಆದರೂ ಅವರು ಪ್ರಯತ್ನದಿಂದ ಆಚೆ ದಡ ಮುಟ್ಟಿದರು.

ವಾಸುದೇವ ಕೊಡಲಿಯನ್ನೂ ತನ್ನೊಂದಿಗೆ ತಂದಿದ್ದ. ಅದನ್ನು ಕಂಡ ಸಿದ್ಧಾರ್ಥ "ಅದೇಕೆ?" ಎಂದು ಪ್ರಶ್ನಿಸಿದ.

"ನಮ್ಮ ಹುಟ್ಟು ಕಳೆದು ಹೋಗಿರಬಹುದು.''

ವಾಸುದೇವನು ಹಾಗೆ ಹೇಳಿದರೂ ತನ್ನನ್ನು ಹುಡುಕುತ್ತ ಬೆಂಬತ್ತಿ ಬಾರದಂತೆ ತಡೆಯಲು ಹುಡುಗ ಹುಟ್ಟನ್ನು ಬಿಸಾಡಿರಬಹುದು ಅಥವಾ ಮುರಿದು ಹಾಕಿರಲೂ ಸಾಕು ಎಂಬ ವಿಚಾರಗಳು ಅವನ ತಲೆಯಲ್ಲಿ ಸುಳಿದಾಡುತ್ತಿದೆಯೆಂದು ಸಿದ್ಧಾರ್ಥ ಅರಿತುಕೊಂಡ. ವಾಸುದೇವನು ಊಹಿಸಿದಂತೆ ದೋಣಿಯಲ್ಲಿ ಹುಟ್ಟೂ ಇರಲಿಲ್ಲ. ಅದನ್ನು ತೋರಿಸಿ ವಾಸುದೇವ ಸಿದ್ಧಾರ್ಥನ ಮೋರೆ ನೋಡಿ ಮುಗುಳುನಕ್ಕ. ನಿನ್ನ ಮಗ ಏನು ಹೇಳಿದನೆಂದು ನಿನಗೆ ಗೊತ್ತಾಯಿತೇ? ತನ್ನನ್ನು ಹುಡುಕಿಕೊಂಡು ಬರುವುದು ಬೇಡವೆಂದು ಅವನ ಅಭಿಪ್ರಾಯ. ಆದರೆ ಇದನ್ನು ವಾಸುದೇವ ಬಾಯಿ ಬಿಚ್ಚಿ ಹೇಳಲಿಲ್ಲ. ಆ ನಗುವಿನಿಂದಲೇ ಸಿದ್ಧಾರ್ಥನಿಗೆ ಅರ್ಥವಾಯಿತು. ವಾಸುದೇವ ಹೊಸ ಹುಟ್ಟು ಕೆತ್ತಲಾರಂಭಿಸಿದ. ಸಿದ್ಧಾರ್ಥನು ಹುಡುಗನನ್ನು ಹುಡುಕಿದ.

ಸಿದ್ಧಾರ್ಥ ಕಾಡಿನಲ್ಲಿ ಬಹಳ ಹೊತ್ತಿನ ವರೆಗೆ ಅಲೆದ. ಕೊನೆಗೆ ತನ್ನ ಪ್ರಯತ್ನ ನಿಷ್ಫಲವೆಂದು ಅವನು ಯೋಚಿಸಿದ. ಪ್ರಾಯಶಃ ಹುಡುಗ ಈ ಕಾಡು ದಾಟಿ ನಗರಕ್ಕೆ ತೆರಳಿರಬೇಕು. ಒಂದು ವೇಳೆ ಕಾಡಿನಲ್ಲಿದ್ದರೂ ತನ್ನನ್ನು ಕಂಡ ಮೇಲೆ ಅಡಗಿಕೊಳ್ಳದೇ ಇರಲಾರ. ಬಹಳ ಪರಿಭಾವಿಸಿದ ಬಳಿಕ ಅವನು ಸಂಕಟಪಡಲಿಲ್ಲ. ಏಕೆಂದರೆ ಮಗನಿಗೇನೂ ಅಪಾಯವಾಗಿಲ್ಲ, ಅಂತಹ ಸಂಭವವೂ ಇಲ್ಲವೆಂದು ಅವನಿಗೆ ಗೊತ್ತು. ಹಾಗಿದ್ದರೂ ಅವನು ಕಾಲುದಾರಿ ಹಿಡಿದು ಮುಂದೆ ಮುಂದೆ ಹೋದ. ಮಗನನ್ನು ಪುನಃ ಕರೆದು

ಕೊಂಡು ಬರುವ ವಿಚಾರದಿಂದಲ್ಲ. ಪುನಃ ಒಮ್ಮೆ ಮಗನನ್ನು ನೋಡಬೇಕೆಂಬ ಅತ್ಯಾಶೆಯಿಂದ ಹೋದ.

ಸಿದ್ಧಾರ್ಥ ನಗರದ ದಾರಿ ಹಿಡಿದ. ಆ ಪಟ್ಟಣದ ಸಮೀಪ ಕಮಲೆಯ ವನವೂ ಇತ್ತು. ಅದರ ಬಾಗಿಲ ಬಳಿ ಪುನಃ ಅವನು ನಿಂತುಕೊಂಡ. ಆಗ ಹಿಂದಿನ ಘಟನೆಗಳೆಲ್ಲ ಮತ್ತೆ ತಲೆಯಲ್ಲಿ ಸುಳಿದಾಡಿದುವು. ಕಮಲಾ ಪಲ್ಲಕಿಯಲ್ಲಿ ಕುಳಿತು ಹೋಗುತ್ತಿದ್ದಾಗ ಯತಿಯಾಗಿದ್ದ ಸಿದ್ಧಾರ್ಥ ಆ ವನದ ಬಾಗಿಲಿನ ಮುಂದೆ ನಿಂತಿದ್ದ. ಆ ದೃಶ್ಯವೂ ಅವನ ಕಣ್ಣ ಮುಂದೆ ಕಟ್ಟಿತು. ಸ್ವಲ್ಪ ಹೊತ್ತು ಕಳೆದ ಮೇಲೆ ಬಾಗಿಲಿನ ಮೂಲಕ ವನದೊಳಗೆ ಇಣಿಕಿ ನೋಡಿದ. ಸುಂದರ, ಮನೋಹರ, ಮರಗಳ ನೆರಳಲ್ಲಿ ಬುದ್ಧ ಭಿಕ್ಷುಗಳು ಅತ್ತಿಂದಿತ್ತ ತಿರುಗಾಡುತ್ತಿದ್ದರು.

ಸಿದ್ಧಾರ್ಥ ಅಲ್ಲೇ ದೀರ್ಘ ಕಾಲದ ವರೆಗೆ ನಿಂತ. ಹಿಂದಿನ ಚಿತ್ರಗಳೆಲ್ಲ ಅವನ ಕಣ್ಣಿಗೆ ಕಾಣಿಸುತ್ತಿದ್ದುವು. ವನದೊಳಗಿರುವ ಭಿಕ್ಷುಗಳು ಅವನ ದೃಷ್ಟಿಗೆ ಬಿದ್ದರು. ನೋಡುತ್ತಿದ್ದ ಹಾಗೆ ನವಯೌವನ ಭರಿತನಾದ ಸಿದ್ಧಾರ್ಥ ಲಾವಣ್ಯವತಿಯಾದ ಕಮಲೆಯೊಡನೆ ಸರಸ ಶೃಂಗಾರದಲ್ಲಿ ತನ್ಮಯನಾಗಿದ್ದುದನ್ನು ಕಂಡ ! ಕಮಲಾ ತನ್ನನ್ನು ಸ್ವಾಗತಿಸಿ ಪ್ರಥಮ ಸಲ ಚುಂಬಿಸಿದಳು! ತನ್ನ ಯತಿ ವೇಷ, ಭಾಷೆ, ಬದುಕುಗಳನ್ನು ಗರ್ವದಿಂದಲೂ ತಿರಸ್ಕಾರದಿಂದಲೂ ತ್ಯಜಿಸಿದ ದೃಶ್ಯವನ್ನು ಕಂಡ ! ಕುತೂಹಲದಿಂದಲೂ ಹೆಮ್ಮೆಯಿಂದಲೂ ಪ್ರಾಪಂಚಿಕ ಜೀವನವನ್ನು ಆರಂಭಿಸಿದ ಚಿತ್ರವೂ ಅಲ್ಲಿತ್ತು. ಕಾಮಸ್ವಾಮಿ, ಸೇವಕರು, ಸತ್ಕಾರ ಕೂಟಗಳು, ವನಭೋಜನ, ಪಗಡೆ ಜೂಜುಗಾರರು, ಸಂಗೀತಗಾರರು ಎಲ್ಲರನ್ನೂ ನೋಡಿದ. ಕಮಲೆಯ ಹಾಡುವ ಹಕ್ಕಿ ಕೂಡಾ ಬಂಗಾರದ ಪಂಜರದಲ್ಲಿತ್ತು! ತನ್ನ ಹಿಂದಿನ ಬಾಳನ್ನು ಮತ್ತೊಮ್ಮೆ ಅನುಭವಿಸಿದಂತೆಯೇ ಆಯಿತು. ಸಂಸಾರದಲ್ಲಿ ಬಿದ್ದು, ಬೇಸರಪಟ್ಟು, ಮುದುಕನಾಗಿ, ಓಡಿಹೋಗಿ, ಹತಾಶೆಯಿಂದ ಆತ್ಮಹತ್ಯೆ ಮಾಡಲೆಸಗಿ, ಓಂಕಾರವನ್ನುಚ್ಚರಿಸುವ ವರೆಗೂ ಅವನು ಅನುಭವಿಸಿದ.

ವನದ ಬಾಗಿಲಲ್ಲಿ ಬಹಳ ಹೊತ್ತು ನಿಂತ ಮೇಲೆ, ಅಲ್ಲಿಗೆ ಬಂದುದು ಹುಚ್ಚುತನದ ಕೆಲಸವಾಯಿತು ಎಂದಂದುಕೊಂಡ. ಬಾಲಕನು ಅವನ ಕೈಯೊಳಗಿಲ್ಲ. ಒತ್ತಾಯ ಮಾಡುವ ಹಾಗೂ ಇಲ್ಲ. ಮೈಮೇಲೆ ಗಾಯ

ವಿದ್ದವರು ಅವನ್ನು ಪ್ರೀತಿಸುವಂತೆ ಮತ್ತು ಅದು ಬೇಗನೆ ಗುಣ ಹೊಂದುವಂತೆ ಸಿದ್ಧಾರ್ಥನೂ ಬಯಸಿದ.

ಗಾಯ ತಕ್ಷಣ ಗುಣವಾಗಲಿಲ್ಲವಲ್ಲ ಎಂಬವನ ಚಿಂತೆ. ಮಗನನ್ನು ನೋಡುವ ಮೋಹದಿಂದ ಬಂದ. ಆದರೆ ಅದೂ ನಿಷ್ಫಲವಾಯಿತು. ದುಃಖದಿಂದ ಅಲ್ಲೇ ಕುಳಿತು ಬಿಟ್ಟ. ಅವನೆದೆಯಲ್ಲಿದ್ದುದು ಏನೋ ಒಂದು ಸತ್ತಂತಾಯಿತು ಅದರಿಂದ ಸುಖವಿಲ್ಲ. ಆಶೆಯೂ ಕೈಗೂಡಲಿಲ್ಲ. ಹತಾಶಯಾದರೂ ಸಹನೆಯಿಂದ ಕುಳಿತ. ಈ ಸ್ಮರಣೆ ಅವನ ಸಿರಿ. ದುಃಖದಿಂದಲೂ ದೇಹಾಯಾಸದಿಂದಲೂ ಅವನ ಎದೆ ಬಡಿಯುತ್ತಿತ್ತು. ಅವರ ವಾಣಿಯನ್ನು ಕೇಳುವ ಆತುರದಿಂದ ಕಿವಿಗೊಟ್ಟ.

ಕುಳಿತಲ್ಲಿಯೇ ಸಿದ್ಧಾರ್ಥ ಕೈಗಳನ್ನು ಕಟ್ಟಿ ಮತ್ತಷ್ಟು ಮುದುಡಿಕೊಂಡ. ಅವನ ಕಣ್ಣ ಮುಂದೆ ಕಟ್ಟಿದ ದೃಶ್ಯಗಳೆಲ್ಲ ಅದೃಶ್ಯವಾದುವು. ಎಲ್ಲ ಶೂನ್ಯದಲ್ಲಿ ಮಿಲನ ಹೊಂದಿದುವು. ಗಾಯದ ವೇದನೆ ಹೆಚ್ಚಿತ್ತು. ಆಗ ಅವನು ಸಹಿಸಲಾರದೆ ಓಂಕಾರವನ್ನುಚ್ಚರಿಸಿದ. ವನದಲ್ಲಿದ್ದ ಭಿಕ್ಷುಗಳು ಅವನನ್ನು ನೋಡಿದರು. ಧೂಳಿನಿಂದ ಸಿದ್ಧಾರ್ಥನ ತಲೆಗೂದಲೆಲ್ಲ ಕೆಂಪಾಗಿತ್ತು. ಭಿಕ್ಷುವೊಬ್ಬನು ಎರಡು ಬಾಳೆಹಣ್ಣುಗಳನ್ನು ತಂದು ಸಿದ್ಧಾರ್ಥನ ಮುಂದಿಟ್ಟು ಹೋದನು. ಆದರೆ ಅವನು ಅವನ್ನು ನೋಡಲಿಲ್ಲ.

ಯಾರೋ ಅವನ ಭುಜದ ಮೇಲೆ ಕೈ ಇಟ್ಟಾಗ ಪರವಶನಾಗಿದ್ದ ಸಿದ್ಧಾರ್ಥನಿಗೆ ಎಚ್ಚರವಾಯಿತು. ಆ ಕೃಪಾ ಹಸ್ತಸ್ಪರ್ಶದ ಗುರುತೂ ಆಯಿತು. ಎದ್ದು ವಾಸುದೇವನಿಗೆ ವಂದಿಸಿದ. ವಾಸುದೇವನ ನಗುವ ಮುಖವನ್ನು ಕಂಡೊಡನೆ ಸಿದ್ಧಾರ್ಥನಿಗೂ ನಗು ಬಂದಿತು

ಆಗ ತನ್ನ ಮುಂದಿದ್ದ ಬಾಳೆಹಣ್ಣುಗಳ ಮೇಲೆ ಅವನ ದೃಷ್ಟಿಬಿತ್ತು. ಅದನ್ನು ಹೆಕ್ಕಿ ಒಂದನ್ನು ವಾಸುದೇವನಿಗೆ ಕೊಟ್ಟು, ಮತ್ತೊಂದನ್ನು ತಾನು ನುಂಗಿದ. ಆ ಮೇಲೆ ಮೌನದಿಂದ ವಾಸುದೇವನ ಹಿಂದೆಯೇ ಹೋದ. ಕಾಡು ದಾಟಿ ಅವರು ನದಿಯ ಕಡವಿಗೂ ಬಂದರು. ಇಬ್ಬರೂ ಏನೂ ಮಾತನಾಡಲಿಲ್ಲ. ಹುಡುಗನ ಸುದ್ದಿ ಎತ್ತಲಿಲ್ಲ. ಸಿದ್ಧಾರ್ಥ ತನ್ನ ಹಾಸಿಗೆಯಲ್ಲಿ ಒರಗಿದ. ಸ್ವಲ್ಪ ಹೊತ್ತಿನ ಮೇಲೆ ತೆಂಗಿನ ಹಾಲು ಕೊಡಲು ವಾಸುದೇವ ಹೋದಾಗ ಸಿದ್ಧಾರ್ಥನಿಗೆ ಗಾಢ ನಿದ್ದೆ ಹತ್ತಿತ್ತು.

# ೧೩ ನೆಯ ಅಧ್ಯಾಯ

ಪುತ್ರನ ಅಗಲಿಕೆಯ ಗಾಯ ದೀರ್ಘ ಕಾಲದ ವರೆಗೆ ಉರಿಯಿತು. ಮಕ್ಕಳೊಂದಿಗೆ ಬಂದ ಅನೇಕ ಪ್ರಯಾಣಿಕರನ್ನು ಸಿದ್ಧಾರ್ಥ ಹೊಳೆದಾಟಿಸಿದ. ಅವರ ಆ ಮಕ್ಕಳನ್ನು ಕಂಡು ಅವನಿಗೆ ಅಸೂಯೆ. "ಹಲವರಿಗೆ ಈ ಮಕ್ಕಳ ಸುಖವಿದೆ. ನನಗೂ ಏಕಿರಬಾರದು? ದುಷ್ಟರಿಗೂ ಕಳ್ಳಕಾಕರಿಗೂ ಮಕ್ಕಳಿವೆ. ಮಕ್ಕಳೂ ಅವರನ್ನು ಪ್ರೀತಿಸುತ್ತವೆ. ನನಗೆ ಮಾತ್ರ ಆ ಭಾಗ್ಯವಿಲ್ಲ" ಎಂದವನು ಮಕ್ಕಳಂತೆ ತರ್ಕಿಸಿ, ಚಿಂತಿಸಿದ. ಅವನು ಅಷ್ಟರಮಟ್ಟಿಗೆ ಸಾಮಾನ್ಯ ಮನುಷ್ಯನಾದ.

ಈಗ ಜನರನ್ನು ನೋಡುವ ಅವನ ದೃಷ್ಟಿಯೇ ಬದಲಾಯಿತು. ಹೆಮ್ಮೆಯಿಂದಅಥವಾ ತಾನೊಬ್ಬ ಅಧಿಕ ಬುದ್ಧಿವಂತನೆಂಬ ಅಹಂಕಾರದಿಂದ ನೋಡಲಿಲ್ಲ. ಹೆಚ್ಚು ಕುತೂಹಲ, ಪ್ರೀತಿ, ದಯಾದೃಷ್ಟಿಯಿಂದ ಪರಿಕಿಸಿದ.

ಆ ಹೊಳೆ ದಾಟಲು ಬಂದ ವರ್ತಕರು, ಯೋಧರು, ಸ್ತ್ರೀಯರು ಎಲ್ಲರೂ ಅವನಿಗೆ ಹಿಂದಿನಂತೆ ಪರಕೀಯರಾಗಿ ತೋರಲಿಲ್ಲ. ಅವರು ಯಾರು ಏನೆಂದು ಅವನಿಗೆ ಗೊತ್ತಿಲ್ಲ. ಅವನ ವಿಷಯ, ವಿಚಾರಗಳೂ ಅವರಿಗಿಂತ ತೀರ ಭಿನ್ನ. ಆದರೂ ಜೀವನದ ಆಶೆ ಆಕಾಂಕ್ಷೆಗಳೆಲ್ಲ ಒಂದೇ ಎಂದು ಕಂಡುಕೊಂಡ. ಸ್ವತಃ ಅವನು ಸಂಯಮಿ ಇತ್ತೀಚಿಗೆ ಆದ ಗಾಯದ ನೋವನ್ನೂ ಸಹಿಸಿಕೊಂಡಿರುವನು. ನಿಜ. ಆದರೆ ಆ ಸಾಮಾನ್ಯ ಜನರೂ ತನ್ನ ಸಹೋದರರೆಂದು ಭಾವಿಸತೊಡಗಿದ. ಅವರ ಡಂಭ, ಬಯಕೆ, ಕ್ಷುಲ್ಲಕತನಗಳೆಲ್ಲ ವ್ಯರ್ಥವೆಂದೆನಿಸಲಿಲ್ಲ. ಹೀಗಾಗಲು ಏನು ಕಾರಣ ಎಂದು ಅವನಿಗೆ ಅರ್ಥವಾಗಿದೆ. ಅವರನ್ನೂ ಪ್ರೀತಿಸಲಾರಂಭಿಸಿದ. ಅವರು ಗೌರವಕ್ಕೂ ಪಾತ್ರರೆಂದು ತಿಳಿದ.

ತಾಯಿ ಅತ್ಯಂತ ಅಂಧಶ್ರದ್ಧೆಯಿಂದ ತನ್ನ ಮಗುವನ್ನು ಪ್ರೀತಿಸುತ್ತಾಳೆ. ತಂದೆಗೆ ತನ್ನ ಏಕಮಾತ್ರ ಸುತನ ಮೇಲೂ ಮೋಹದ ಹುಚ್ಚು. ಒಬ್ಬಳು ತರುಣಿಗೆ ಆಭರಣಗಳ ಮೇಲೆ ಜೀವ ಮತ್ತೊಬ್ಬಳಿಗೆ ಪುರುಷರ

ಮೇಲೆ ಆಸಕ್ತಿ. ಇವೆಲ್ಲ, ಸಂಚು, ಹುಚ್ಚು ಸಂಗತಿಗಳಾದರೂ ಬಲವಾದ, ಸಜೀವ ಪ್ರೇರಕ ಬಯಕೆಗಳು. ಕ್ಷುಲ್ಲಕಗಳಾಗಿ ಸಿದ್ಧಾರ್ಥನಿಗೆ ತೋರಲಿಲ್ಲ. ಅವುಗಳಿಂದಲೇ ಜನರು ಬಾಳಿ ಬದುಕಿರುವರು. ಮಹತ್ತಾದ ಕಾರ್ಯಗಳನ್ನು ಮಾಡುತ್ತಿರುವರು. ಯಾತ್ರೆ, ಯುದ್ಧಗಳಲ್ಲಿ ತೊಡಗುವರು. ಅಮಿತ ಕಷ್ಟನಷ್ಟಗಳನ್ನು ಅನುಭವಿಸುವರು. ಸಿದ್ಧಾರ್ಥ ಇದೆಲ್ಲವನ್ನು ನೆನಸಿಕೊಂಡು ಅವರನ್ನು ಪ್ರೀತ್ಯಾದರದಿಂದ ನೋಡಿದ. ಅವರೆಲ್ಲರ ಬದುಕು, ಬಯಕೆಗಳಲ್ಲಿ ಜೀವನ, ಜೀವಸತ್ವ, ಅಮರತ್ವ, ಬ್ರಹ್ಮತ್ವದ ದಿವ್ಯ ದರ್ಶನವೂ ಆಯಿತು.

ಜನರ ಅಂಧಶ್ರದ್ಧೆ, ಶಕ್ತಿ, ಸಹನೆಗಳು ಮೆಚ್ಚತಕ್ಕಂತಹವುಗಳೇ ಪ್ರಪಂಚದ ಸರ್ವ ಜೀವಜಂತುಗಳೆಲ್ಲ ಒಂದೇ ಎಂಬ ಒಂದು ಸಣ್ಣ ವಿಷಯವನ್ನು ಬಿಟ್ಟರೆ ಯತಿಗಳಲ್ಲಿದ್ದುದೆಲ್ಲ ಅವರಲ್ಲೂ ಇದೆ. ಆದರೆ ಈ ವಿಷಯ, ಈ ಜ್ಞಾನ ಅಷ್ಟು ಅಮೂಲ್ಯವೇ? ಅದು ಕೂಡಾ ಪ್ರಾಯಶಃ ತತ್ವಜ್ಞಾನಿಗಳ ಬರಿಭ್ರಾಂತಿ ಆಗಿರಲಿಕ್ಕಿಲ್ಲವೇ? ಈ ತತ್ವ ಜ್ಞಾನಿಗಳೂ ಯೋಚನಾ ಶಿಶುಗಳೇ! ಪ್ರಾಪಂಚಿಕರೂ ಇನ್ನಿತರ ಎಲ್ಲ ವಿಷಯಗಳಲ್ಲಿ ಅವರ ಸರಿಸಮಾನರೇ ಸರಿ. ಒಮ್ಮೊಮ್ಮೆ ಮೇಲು ಎಂದೂ ಹೇಳಬಹುದು. ಎಷ್ಟೋ ಸಲ ಪ್ರಾಣಿಗಳು ಕೂಡಾ ಮನುಷ್ಯರಿಗಿಂತ ಮೇಲಾಗಿ ವರ್ತಿಸುತ್ತವೆ!

ಜ್ಞಾನವೆಂದರೇನು ಮತ್ತು ತನ್ನ ಶೋಧನೆಯ ಗುರಿ ಏನೆಂದು ಸಿದ್ಧಾರ್ಥ ತನ್ನೊಳಗೆ ಅರಿತುಕೊಳ್ಳಲಾರಂಭಿಸಿದ. ಆ ಅರಿವು ದಿನೇ ದಿನೇ ಪರಿಪಕ್ವವಾಗುತ್ತ ಬಂತು. ಆತ್ಮದ ಸಿದ್ಧತೆ, ಶಕ್ತಿ, ಯೋಚನಾ ಪದ್ಧತಿ, ಅನುಭಾವ, ಹಾಗೂ ಜೀವನದ ಪ್ರತಿಯೊಂದು ಕ್ಷಣಕ್ಷಣದಲ್ಲೂ ಐಕ್ಯಚಿಂತನೆ ಇವೇ ಅವು. ವಾಸುದೇವನ ಮಗುವಿನಂತಹ ಮುಖದಲ್ಲೂ ಆ ಅನುಭಾವ ಒಡಮೂಡಿದೆ.

ಆದರೆ ಮಗನ ಅಗಲಿಕೆಯ ಗಾಯ ಇನ್ನೂ ಮಾಯವಾಗಿರಲಿಲ್ಲ.ಆಗಾಗ ಅತ್ಯಾಸೆಯಿಂದ ಅವನನ್ನು ನೆನಸಿದ. ಪ್ರೇಮ ಮತ್ತು ವಾತ್ಸಲ್ಯಗಳೂ ಜೀವವನ್ನು ತುಂಬುತಿದ್ದುವು. ಅವು ಆ ಗಾಯವನ್ನು ಒಳಗೊಳಗೆ ಕೊರೆಯುತಿದ್ದುವು. ಈ ಪ್ರೇಮದ ಹುಚ್ಚುತನಗಳನ್ನೆಲ್ಲ ಅವನು ಅನುಭವಿಸುವಂತಾಯಿತು. ಉರಿಜ್ವಾಲೆ ಕಡಿಮೆಯಾಗಲಿಲ್ಲ.

ಒಂದು ದಿನ ನೋವನ್ನು ಸಹಿಸಲಾರದೆ ಸಿದ್ಧಾರ್ಥ ಹೊಳೆದಾಟಿ, ಮಗನನ್ನು ಹುಡುಕುವದಕ್ಕಾಗಿ ನಗರಾಭಿಮುಖವಾಗಿ ತೆರಳಲು ಸಿದ್ಧನಾದ. ನದಿಯಲ್ಲಿ ಪ್ರವಾಹವಿರಲಿಲ್ಲ. ಆದುದರಿಂದ ನೀರು ಮೆಲ್ಲಗೆ ಹರಿಯುತಿತ್ತು. ಅದು ಬೇಸಿಗೆ ಕಾಲ. ಅದರ ಧ್ವನಿಯೂ ವಿಲಕ್ಷಣವಾಗಿತ್ತು. ಅದು ನಗುತಿತ್ತು! ಆ ವಯೋವೃದ್ಧನನ್ನು ಕಂಡು ನದಿ ನಗುತಿತ್ತು. ಅದನ್ನು ಕೇಳಿ ಸಿದ್ಧಾರ್ಥ ಸ್ತಂಭೀಭೂತನಾದ. ನೀರಿಗೆ ಮೋರೆ ಮುಟ್ಟುವ ವರೆಗೂ ಬಗ್ಗಿದ. ಆಗ ನೀರಿನಲ್ಲಿ ಅವನು ತನ್ನ ಸ್ವಂತ ಪ್ರತಿಬಿಂಬವನ್ನು ಕಂಡ. ಆ ಪ್ರತಿಬಿಂಬದಲ್ಲಿ ಏನಿತ್ತೋ ಏನೋ ಅದನ್ನು ಕಂಡೊಡನೆಯೇ ತಾನು ಮರೆತುದುದನ್ನು ಸಿದ್ಧಾರ್ಥ ಮತ್ತೆ ಸ್ಮರಿಸಿಕೊಂಡ.

ಆ ಮುಖ ಲಕ್ಷಣಗಳೆಲ್ಲ ತಾನು ಪ್ರೀತಿ, ಭೀತಿಯಿಂದ ಕಾಣುತಿದ್ದ ತನ್ನ ತಂದೆಯಂತೆಯೇ ಕಂಡಿತು. ಸಿದ್ಧಾರ್ಥ ಕುಮಾರನಾಗಿದ್ದಾಗ ಯತಿಗಳೊಡನೆ ಹೊರಟು ಹೋಗಲು ಬಯಸಿ ತನ್ನ ತಂದೆ ಅದಕ್ಕೊಪ್ಪುವಂತೆ ಒತ್ತಾಯ ಮಾಡಿದ್ದ. ಅದೀಗ ಅವನ ನೆನಪಿಗೆ ಬಂದಿತು. ತಾನು ತಂದೆಯನ್ನು ಅಗಲಿ ಬಂದುದು, ಮರಳದೇ ಇದ್ದುದು ಅದನ್ನೂ ಯೋಚಿಸಿದ. ನಾನೀಗ ನನ್ನ ಮಗನ ಸಲುವಾಗಿ ಪಡುತ್ತಿರುವ ಸಂಕಟವನ್ನು ನನ್ನ ತಂದೆಯೂ ಅನುಭವಿಸಿರಬೇಕಲ್ಲವೇ ? ನನ್ನ ತಂದೆ ಇಷ್ಟರೊಳಗೆ ಸತ್ತು ಹೋಗಿರಬೇಕು. ಒಮ್ಮೆ ಕೂಡಾ ನನ್ನ ಮೋರೆ ನೋಡಲು ಅವನಿಗಾಗಲಿಲ್ಲ. ಅದೇ ದುರದೃಷ್ಟ ನನ್ನದೂ ಆಗಲಿಕ್ಕೇ ಬೇಕು. ಇದೆಂತಹ ವೈಚಿತ್ರ್ಯ ! ಇದೆಂತಹ ಅದ್ಭುತ ಅದೃಷ್ಟ ಚಕ್ರ !

ನದಿ ನಗುತ್ತಿತ್ತು, ಸಿದ್ಧಾರ್ಥ ಪುನಃ ದೋಣಿ ಹತ್ತಿ ಗುಡಿಸಲಿನ ಕಡೆ ಹುಟ್ಟು ಹಾಕಲಾರಂಭಿಸಿದ. ನದಿಯಗಲಕ್ಕೂ ತಂದೆ, ಮಗ, ನಗುವ ನದಿ ಇವುಗಳ ಯೋಚನೆ. ಮನೋಕ್ಷೋಭೆ ಹತಾಶೆಗಳೂ ಅವನನ್ನು ಮುತ್ತಿದುವು. ತನ್ನ ಹಾಗೂ ಈ ಪ್ರಪಂಚದ ಬಗ್ಗೆ ಒಮ್ಮೆ ಗಟ್ಟಿಯಾಗಿ ನಕ್ಕು ಬಿಡಬೇಕೆಂದು ಅವನಿಗನ್ನಿಸಿತು.

ಗಾಯದ ಉರಿ ಇನ್ನೂ ಇದೆ. ತನ್ನ ಅದೃಷ್ಟದ ವಿರುದ್ಧ ಸಿದ್ಧಾರ್ಥ ದಂಗೆಯೇಳುತಿದ್ದ. ಇನ್ನೂ ಗಂಭೀರವಾಗಿಲ್ಲ. ದುಃಖವನ್ನೂ ಜಯಿಸಿಲ್ಲ. ಹಾಗಿದ್ದರೂ ಆಶಾ ಜ್ಯೋತಿ ತೋರುತ್ತಿದೆ. ಅವನು ಗುಡಿಸಲಿಗೆ ಹಿಂತಿರು

ಗಿದ ಮೇಲೆ ಸರ್ವಸ್ವವನ್ನೂ ವಾಸುದೇವನ ಮುಂದೆ ಹೇಳಿಬಿಡಬೇಕೆಂಬ ಬಯಕೆ ಹೆಚ್ಚಾಯಿತು.

ವಾಸುದೇವ ಗುಡಿಸಲಿನಲ್ಲಿ ಬುಟ್ಟಿ ಹೆಣೆಯುತ್ತಿದ್ದ. ಅವನೀಗ ದೋಣಿ ನಡೆಸುವುದೇ ಇಲ್ಲ. ದೃಷ್ಟಿ ಮಂದವಾಗಿದೆ. ಕೈಕಾಲುಗಳು ಬಲಗುಂದಿವೆ. ಆದರೆ ಮುಖ ಮಾತ್ರ ಇನ್ನೂ ಗಾಂಭೀರ್ಯ ಹಾಗೂ ಪ್ರಕಾಶವನ್ನು ಕಳೆದು ಕೊಂಡಿಲ್ಲ.

ಸಿದ್ಧಾರ್ಥ ಆ ಮುದುಕನ ಸಮೀಪ ಕುಳಿತು ಮೆಲ್ಲಗೆ ಮಾತನ್ನಾರಂಭಿಸಿದ. ಹಿಂದೆಂದೂ ಹೇಳದಿದ್ದುದನ್ನು ಈಗ ಅವನ ಮುಂದೆ ಹೇಳಿದ. ಮಗನ ಮೇಲಿನ ವ್ಯಾಮೋಹ, ಆ ಗಾಯದ ಉರಿ, ಸುಖಿಗಳಾದ ತಾಯಿ ತಂದೆಗಳ ಮೇಲಿನ ಈರ್ಷ್ಯೆ, ಹುಚ್ಚು ಭಾವನೆ, ತನ್ನ ಮನಸ್ಸಿನ ಹೊಡೆದಾಟಗಳೆಲ್ಲವನ್ನೂ ವಿವರಿಸಿದ. ಯಾವುದನ್ನೂ ಮುಚ್ಚಿ, ಬಚ್ಚಿಟ್ಟು ಕೊಳ್ಳಲಿಲ್ಲ. ಈ ದಿನ ಮಗನ ಮೇಲಿನ ಪ್ರೀತಿಯಿಂದ ಹುಡುಕುವುದಕ್ಕಾಗಿ ನದಿ ದಾಟಿ ಹೋದ ಸಂಗತಿಯನ್ನೂ ನದಿ ನಕ್ಕುದುದನ್ನೂ ಹೇಳಿಕೊಂಡ.

ವಾಸುದೇವ ಎಲ್ಲವನ್ನೂ ಗಂಭೀರವಾಗಿಯೇ ಆಲಿಸಿದ. ತನ್ನ ಕಷ್ಟ, ಚಿಂತೆ, ದುಃಖ, ಆಶೆಗಳೆಲ್ಲವನ್ನೂ ಅವನು ಕುಡಿದು ಆ ಮೇಲೆ ಅವನೆಡೆಗೇ ಮತ್ತೆ ಹರಿಯಬಿಟ್ಟಂತೆ ಸಿದ್ಧಾರ್ಥನಿಗನ್ನಿಸಿತು. ತನ್ನ ಗಾಯವನ್ನು ಅವನಿಗೆ ತೋರಿಸುವುದೆಂದರೆ ನದಿಯೊಳಗೆ ತೊಳೆದ ಹಾಗೆಯೇ. ನದಿ ನೀರು ಉರಿಯನ್ನು ಪರಿಹರಿಸಿ ಬಿಡುತ್ತದೆ. ಸಿದ್ಧಾರ್ಥ ಹೇಳುತ್ತ ಹೋದಂತೆ, ವಾಸುದೇವನ ಹಾಗೆ ಅವನು ಕಾಣಲಿಲ್ಲ. ಮರವು ನೀರನ್ನು ಹೀರಿಕೊಳ್ಳುವಂತೆ ಈ ಮೌನ ಮುನಿಯು ತನ್ನೆಲ್ಲ ದುಃಖವನ್ನೂ ಹೀರಿಕೊಳ್ಳುತಿದ್ದಾನೆ; ಅವನು ದೇವರೇ ಎಂದು ಸಿದ್ಧಾರ್ಥನಿಗೆ ಅನುಭವವಾಯಿತು.

ಸಿದ್ಧಾರ್ಥ ಮಾತು ನಿಲ್ಲಿಸಿದ ಮೇಲೆ ವಾಸುದೇವ ಅವನ ಕಡೆ ಅರೆದೆರೆದ ಕಣ್ಣುಗಳಿಂದ ನೋಡಿದ. ಅವನೇನೂ ಉತ್ತರ ಕೊಡಲಿಲ್ಲ. ಆದರೆ ಆ ಮುಖದಲ್ಲಿ ಪ್ರೇಮ, ಗಾಂಭೀರ್ಯ, ಪ್ರೀತಿ, ಜ್ಞಾನ, ಜ್ಯೋತಿಗಳು ಹೊಳೆಯುತಿದ್ದುವು. ವಾಸುದೇವ ಸಿದ್ಧಾರ್ಥನ ಕೈ ಹಿಡಿದು ಎಬ್ಬಿಸಿ, ಅವನನ್ನು ನದೀ ತಟಾಕಕ್ಕೆ ಕರೆದುಕೊಂಡು ಹೋದ.

"ನದಿ ನಗುವುದನ್ನು ಕೇಳಿದೆಯಲ್ಲ! ನೀನು ಎಲ್ಲವನ್ನೂ ಕೇಳಿಲ್ಲ.

ಕಿವಿಗೊಡು" ಎಂದು ವಾಸುದೇವ ಹೇಳಿದ.

ಇಬ್ಬರೂ ತಮ್ಮ ನಿತ್ಯದ ಸ್ಥಳದಲ್ಲಿ ಕುಳಿತು ಕಿವಿಗೊಟ್ಟರು. ನದಿಯು ಹಾಡಿನ ನಾನಾ ರಾಗಗಳು ಮೆಲ್ಲಗೆ ಪ್ರತಿಧ್ವನಿಸುತಿದ್ದವು ಸಿದ್ಧಾರ್ಥ ನದಿಯನ್ನು ನೋಡಿದ. ಆಗ ಆ ಹರಿವ ನೀರಿನಲ್ಲಿ ಅನಂತ ಚಿತ್ರಗಳನ್ನು ಕಂಡ. ಅವನ ತಂದೆ ಒಬ್ಬಂಟಿಗ. ಮಗನಿಗಾಗಿ ಬಹಳ ದುಃಖಿಸುತಿದ್ದ. ಅವನೂ ಒಬ್ಬಂಟಿಗನೇ. ಹಾಗೂ ದೂರದಲ್ಲಿರುವ ತನ್ನ ಮಗನಿಗಾಗಿ ಹಂಬಲಿಸುವವನೇ. ತನ್ನ ಆ ಚಿತ್ರವೂ ಸಿದ್ಧಾರ್ಥನ ಕಣ್ಣಿಗೆ ಕಾಣಿಸಿತು. ಅದರಂತೆ ಅವನ ಮಗನೂ ಒಂಟಿಗನೇ. ಜೀವದ ಅನೇಕ ಆಶೆಗಳ ಉರಿವ ದಾರಿಯಲ್ಲಿ ನಡೆಯುತಿದ್ದಾನೆ. ಪ್ರತಿಯೊಂದು ಕಷ್ಟಕರ. ದಾರಿಯಲ್ಲಿ ದೊಡ್ಡ ಅಡೆತಡೆಗಳು. ನದಿ ದುಃಖದ ಗದ್ಗದಿತ ಧ್ವನಿ ತೆಗೆದಿದೆ.

ವಾಸುದೇವ ಸಿದ್ಧಾರ್ಥನ ಕಡೆ ಹೊರಳಿ, "ಕೇಳಿದೆಯಾ?'' ಎಂದು ಪ್ರಶ್ನಿಸುವವರಂತೆ ನೋಟ ಬೀರಿದ.

ಸಿದ್ಧಾರ್ಥ ತಲೆ ಅಲ್ಲಾಡಿಸಿದ

ಸಿದ್ಧಾರ್ಥ ಪುನಃ ನೀರನ್ನು ನೋಡಿದ. ಅವನ ತಂದೆಯ ಚಿತ್ರ, ಅವನ ಚಿತ್ರ, ಅವನ ಮಗನ ಚಿತ್ರ ಎಲ್ಲ ಒಂದರೊಳಗೊಂದು ಹರಿದುವು. ಕಮಲೆಯ ಚಿತ್ರವೂ ತೋರಿ, ಮುಂದೆ ಹರಿದು ಹೋಯಿತು. ಗೋವಿಂದ ಮತ್ತು ಇನ್ನಿತರರ ಚಿತ್ರಗಳೂ ತಲೆ ಎತ್ತಿ ಮುಂದೆ ಸರಿದುವು. ಅವರೆಲ್ಲ ನದಿಯ ಒಂದಂಶವಾದರು ಆಶೆ, ಹಂಬಲ, ಕಷ್ಟಾನುಭವವೆಲ್ಲ ಎಲ್ಲರ ಗುರಿಯೇ. ನದಿಯ ಧ್ವನಿಯಲ್ಲೂ ಆ ತೀರದ ಹಂಬಲ, ಮುಗಿಯದ ದುಃಖ ಹಾಗೂ ಅತೃಪ್ತ ಆಶೆಗಳು ತುಂಬಿವೆ.

ನದಿ ತನ್ನ ಗುರಿಯ ಕಡೆ ಹರಿಯುತ್ತ ಸಾಗಿದೆ. ಅದು ತನ್ನ, ಬಂಧು ಬಳಗದವರ ಹಾಗೂ ಇಷ್ಟರ ವರೆಗೆ ಕಂಡು ಕೇಳದ ಜನರ ಜೀವನ ನದಿಯಂತೆ ಸಿದ್ಧಾರ್ಥನಿಗೆ ತೋರಿತು. ಎಲ್ಲ ನೀರೂ ತೆರೆಗಳೂ ಮುಳುಗುತ್ತ ಏಳುತ್ತ ಗುರಿಯ ಕಡೆ ವೇಗದಿಂದ ಓಡುತ್ತವೆ. ಆ ಗುರಿಗಳೂ ಬಹಳ. ಕೆಲವು ಜಲಪಾತಗಳು. ಕೆಲವು ಸಮುದ್ರಕ್ಕೆ, ಒಂದರ ಹಿಂದೆ ಇನ್ನೊಂದು ಇದ್ದೇ ಇದೆ. ನೀರು ಆವಿಯಾಗಿ ಆಕಾಶಕ್ಕೇರಿತು. ಮತ್ತೆ ಅದೇ ಮಳೆಯಾಗಿ ಸುರಿಯಿತು. ನೀರಿನ ಸೆಲೆಯಾಯ್ತು. ಹಳ್ಳವಾಯಿತು. ನದಿಯಾಯಿತು.

ಪುನಃ ಬದಲಾಯಿತು ಪುನಃ ಹರಿಯಿತು. ಆ ಹಂಬಲದ ಧ್ವನಿ ಮಾತ್ರ ಬದಲಾಗಿಲ್ಲ. ಅದಿನ್ನೂ ದುಃಖದ ಧ್ವನಿಯಾಗಿಯೇ ಪ್ರತಿಧ್ವನಿಸುತ್ತಿದೆ. ಇನ್ನೂ ಅನೇಕ ಧ್ವನಿಗಳು ಅದರೊಂದಿಗೆ ಕೂಡಿಕೊಂಡಿವೆ. ಸುಖ ದುಃಖ, ಒಳ್ಳೇದು ಕೆಟ್ಟದು, ಅಳು ನಗು ನೂರಾರು, ಸಾವಿರಾರು ಧ್ವನಿಗಳು !

ಸಿದ್ಧಾರ್ಥ ಆಲಿಸಿದ. ತನ್ಮಯನಾಗಿ ಆಲಿಸಿದ. ಎಲ್ಲವನ್ನೂ ನುಂಗುವ ವರಂತೆ ಕಿವಿಗೊಟ್ಟ. ಅವನೂ ಆಲಿಸಲು ಚೆನ್ನಾಗಿ ಕಲಿತ. ಹಿಂದೆ ಅವನು ಈ ಧ್ವನಿಗಳೆಲ್ಲವನ್ನು ಕೇಳಿದ್ದನೇನೋ ನಿಜ. ಆದರೆ ಇಂದು ಅದು ಸಂಪೂರ್ಣ ಭಿನ್ನವಾಗಿದೆ. ಏಕೆಂದರೆ ಆ ವಿವಿಧ ಧ್ವನಿಗಳು ಬೇರೆ ಬೇರೆ ಯಾಗಿಲ್ಲ ! ಸುಖ ದುಃಖ, ಅಳು ನಗು ಎಲ್ಲ ಸಮಾನವಾಗಿ ಕೇಳಿಸಿದೆ. ಹಂಬಲಿಸುವವರ ನಿಟ್ಟುಸಿರು, ಜ್ಞಾನಿಗಳ ನಗು, ಸಾಯುವವರ ಆರ್ತನಾದ ಎಲ್ಲ, ಒಂದರೊಳಗೆ ಇನ್ನೊಂದು ಬೆರೆತಿದೆ.

ಒಂದಕ್ಕೆ ಇನ್ನೊಂದು ಸುತ್ತಿ, ಹೆಣೆದು, ಬಿಗಿಯಲ್ಪಟ್ಟಿದೆ. ಎಲ್ಲ ಧ್ವನಿಗಳು, ಗುರಿಗಳು, ಹಸಿದ ಹಂಬಲಗಳು, ದುಃಖಗಳು, ಸುಖಗಳು, ಕೇಡು ಒಳಿತುಗಳು ಒಟ್ಟಿರುವುದೇ ಪ್ರಪಂಚ. ಅವು ಒಟ್ಟಿಗಿದ್ದರೇನೇ ಘಟನಾ ಒಟ; ಜೀವನ ನದಿಯ ಸಂಗೀತ; ಆ ಸಾವಿರಾರು ಧ್ವನಿಗಳ ಸಂಗಮ ಸ್ವರವೇ ಓಂ.

“ಕೇಳಿದೆಯಾ ?” ಎಂದು ಕೇಳುವವರಂತೆ ವಾಸುದೇವ ಅವನನ್ನು ದಿಟ್ಟಿಸಿದ

ವಾಸುದೇವನ ನಗು ಬೆಳಕಿನಂತೆ ಜ್ವಾಜ್ವಲ್ಯಮಾನವಾಗಿತ್ತು. ನದಿಯ ಧ್ವನಿಯಲ್ಲಿ ಓಂಕಾರ ತುಂಬಿರುವಂತೆ ಅವನ ಮೋರೆಯ ಸುಕ್ಕುಗಳಲ್ಲಿ ಆ ಆಹ್ಲಾದ ಮಿನುಗುತಿತ್ತು. ಸಿದ್ಧಾರ್ಥನನ್ನು ಅವನು ನೋಡಿದಾಗ ಆ ಬೆಳಕು ಸಿದ್ಧಾರ್ಥನ ಮೋರೆಯಲ್ಲೂ ಕಾಣಿಸಿತು. ಅವನ ಗಾಯ ಮಾಸಿದೆ. ನೋವು ಕಡಿಮೆಯಾಗಿದೆ.

ಆ ಗಳಿಗೆಯಿಂದ ಸಿದ್ಧಾರ್ಥ ತನ್ನ ಅದೃಷ್ಟದ ವಿರುದ್ಧ ಹೋರಾಡು ವುದನ್ನು ಬಿಟ್ಟ. ಅವನ ಮೋರೆಯಲ್ಲಿ ಜ್ಞಾನೋದಯದ ಕಳೆ ನೆಲೆಸಿತು. ಆಶೆಗಳ ಹೊಯ್ದಾಟವಿಲ್ಲ. ಮೋಕ್ಷ ಕಂಡ ಬೆಳಕು ನಲಿಯಿತು. ಸರ್ವಾಂತ ರ್ಯಾಮಿಯೊಂದಿಗೆ ಅವನೂ ಒಂದಾದ

ಸಿದ್ಧಾರ್ಥನ ಮುಖದಲ್ಲಿ ಆ ಜ್ಞಾನೋದಯದ ದಿವ್ಯಪ್ರಭೆ ಕಂಡ ತಕ್ಷಣ ವಾಸುದೇವನು ಎದ್ದ. ಅವನ ಹೆಗಲ ಮೇಲೆ ಕೈಯಿಟ್ಟು ಹೇಳಿದ: "ಮಿತ್ರಾ, ಈ ಗಳಿಗೆ ಯಾವಾಗ ಬಂದೀತೆಂದು ದಾರಿ ನೋಡುತ್ತಿದ್ದೆ. ಅದೀಗ ಬಂದಿವೆ. ಇನ್ನು ನಾನು ಹೋಗುತ್ತೇನೆ. ನಾನು ವಾಸುದೇವ ಹಾಗೂ ದೋಣಿಕಾರನಾಗಿ ಬಹಳ ಕಾಲ ಬದುಕಿದೆ. ಇನ್ನು ಸಾಕು. ನಿನಗೆ ಶುಭವಾಗಲಿ! ಈ ಗುಡಿಸಲು, ನದಿಗಳಿಗೆಲ್ಲ ನನ್ನ ನಮಸ್ಕಾರಗಳು."

ಸಿದ್ಧಾರ್ಥ ಅವನಿಗೆ ಶಿರಬಾಗಿ ವಂದಿಸಿದ.

"ನನಗೆ ಗೊತ್ತಿತ್ತು. ನೀನು ಕಾಡಿಗೆ ಹೋಗುತ್ತೀಯಾ?" ಎಂದು ಸಿದ್ಧಾರ್ಥ ಮೆಲುದನಿಯಲ್ಲಿ ಪ್ರಶ್ನಿಸಿದ.

"ಹೌದು. ಸರ್ವಾಂತರ್ಯಾಮಿಯೊಂದಿಗೆ ಐಕ್ಯ ಹೊಂದುತ್ತೇನೆ."

ಹಾಗೆ ಹೇಳಿ ವಾಸುದೇವ ಹೊರಟುಹೋದ. ಸಿದ್ಧಾರ್ಥ ಅವನನ್ನೇ ನೋಡುತ್ತ ನಿಂತ. ಆನಂದದಿಂದಲೂ ಗಾಂಭೀರ್ಯದಿಂದಲೂ ದಿಟ್ಟಿಸಿದ. ಅವನ ಹೆಜ್ಜೆಯಲ್ಲಿ ಶಾಂತಿಯೂ ಮೊಗದಾವರೆಯಲ್ಲಿ ಪ್ರಕಾಶವೂ ತುಂಬಿ ತುಳುಕುತಿದ್ದುವು.

## ೧೪ನೆಯ ಅಧ್ಯಾಯ

ಗೋವಿಂದ ಇನ್ನಿತರ ಕೆಲವರು ಭಿಕ್ಷುಗಳೊಂದಿಗೆ ಗೌತಮನಿಗೆ ಕಮಲಾ ಅರ್ಪಿಸಿದ್ದ ವನ ವಿಹಾರದಲ್ಲಿ ವಿಶ್ರಾಂತಿಗಾಗಿ ಬಂದಿದ್ದ. ಹತ್ತಿರದ ನದಿಯ ಕಡವಿನಲ್ಲಿ ಒಬ್ಬ ವಯೋವೃದ್ಧ ಋಷಿ ವಾಸಿಸುತ್ತಿರುವನೆಂದು ಜನರು ಆಡಿಕೊಳ್ಳುತ್ತಿರುವುದನ್ನು ಅವನು ಕೇಳಿದ. ಆ ಸ್ಥಳಕ್ಕೆ ವನದಿಂದ ಒಂದು ದಿನದ ದಾರಿ. ಆದುದರಿಂದ ಆ ಮುನಿಯನ್ನು ನೋಡುವ ಲವಲವಿಕೆಯಿಂದ ಗೋವಿಂದ ಹೊರಟ. ಗೋವಿಂದನು ಬೋಧಿಸತ್ವ ಪರಿಪಾಲಿಸುತ್ತ ಬಂದಿರುವುದಾದರೂ ತರುಣ ಭಿಕ್ಷುಗಳು ಅವನ ನಯವಿನಯ ಹಾಗೂ ವಯೋಮಾನಕ್ಕಾಗಿ ಪ್ರೀತ್ಯಾದರದಿಂದ ನಡೆಸಿಕೊಂಡು ಬಂದಿರುವು

ದಾದರೂ ಅವನ ಹೃದಯದಲ್ಲಿ ಇನ್ನೂ ಅಶಾಂತಿಯೇ ಇದೆ ಅವನ ಶೋಧನೆ ಇನ್ನೂ ಮುಗಿದಿಲ್ಲ.

ಗೋವಿಂದ ನದಿ ದಾಟುವ ಸ್ಥಳಕ್ಕೆ ಬಂದು ಅಜಿ ಹಾಯಿಸಲು ಕೇಳಿದ. ಅಜಿ ದಡ ಸೇರಿದ ಮೇಲೆ ಗೋವಿಂದನು ದೋಣಿಯಿಂದ ಇಳಿಯುತ್ತ "ನೀನು ಯಾತ್ರಿಕರು ಮತ್ತು ಭಿಕ್ಷುಗಳ ಮೇಲೆ ಬಹಳ ದಯೆದೋರಿರಿಸುತಿದ್ದೀಯಾ! ನಮ್ಮಂತಹ ಅನೇಕರನ್ನು ಹೊಳೆ ದಾಟಿಸಿರುವೆ. ನೀನು ಸತ್ಯ ಶೋಧಕನಲ್ಲವೇ ?"

ಸಿದ್ಧಾರ್ಥನ ಕಣ್ಣುಗಳಲ್ಲಿ ನಗು ಮಿಂಚಿತು. "ಮಹಾಸ್ವಾಮಿ, ವಯೋವೃದ್ಧನೂ ಗೌತಮನ ಅನುಯಾಯಿಯೂ ಆಗಿರುವ ನೀನೂ ನೀನೂ ಇನ್ನೂ ಸತ್ಯ ಶೋಧಕನೇ ?" ಎಂದು ಪ್ರಶ್ನಿಸಿದನು.

ಗೋವಿಂದ ಉತ್ತರವಿತ್ತ: "ಹೌದು! ನಾನು ಮುದುಕ. ಆದರೆ ನಾನು ಇನ್ನೂ ಶೋಧನೆಯನ್ನು ಬಿಟ್ಟಿಲ್ಲ. ನಾನು ಅದನ್ನು ಎಂದೂ ಬಿಡುವುದೂ ಇಲ್ಲ. ಅದು ನನ್ನ ಅದೃಷ್ಟವೆಂದು ತೋರುತ್ತದೆ. ನೀನು ಕೂಡಾ ಶೋಧಕನೆಂದು ನನ್ನ ಭಾವನೆ. ಆದುದರಿಂದ ಅದರ ಬಗ್ಗೆ ನಾಲ್ಕು ಮಾತುಗಳನ್ನು ಹೇಳಲಾರೆಯಾ ? "

"ನಿನಗೆ ಅಪಹಾಸ್ಯವಾಗಿ ತೋರುವಂತಹುದನ್ನು ನಾನು ಏನು ಹೇಳಲಿ ? ಪ್ರಾಯಶಃ ನೀನು ಬಹಳ ಶೋಧನೆ ಮಾಡುತ್ತೀ. ಅದರ ದೆಸೆಯಿಂದ ನಿನಗೆ ಗೋಚರಿಸುವುದಿಲ್ಲ.''

" ಅದು ಹೇಗೆ ?"

"ಯಾರಾದರೂ ಹುಡುಕುವಾಗ, ಹುಡುಕುವ ಆ ವಸ್ತುವೊಂದೇ ಅವನ ಕಣ್ಣಿಗೆ ಕಾಣುತ್ತದೆ. ಉಳಿದ ಯಾವುದನ್ನೂ ಕಾಣಲು ಅವನು ಅಸಮರ್ಥ. ತಿಳಿದುಕೊಳ್ಳಲೂ ಅವನಿಂದಾಗುವುದಿಲ್ಲ. ಏಕೆಂದರೆ ಹುಡುಕುವ ಆ ವಸ್ತುವೊಂದೇ ಅವನ ತಲೆಯಲ್ಲಿರುತ್ತದೆ. ಅವನಿಗೊಂದು ಗುರಿಯೂ ಇರುತ್ತದೆ. ಆ ಗುರಿಯಲ್ಲೇ ಅವನು ಅಂಡಲೆಯುತ್ತಾನೆ. ಶೋಧನೆಯೆಂದರೆ ಒಂದು ಗುರಿಯಿದೆ ಎಂದರ್ಥ. ಕಾಣುವುದೆಂದರೆ ಸ್ವತಂತ್ರನಾಗಿ, ಅಂಗೀಕರಿಸುವವನಾಗಿ, ಗೊತ್ತುಗುರಿಯಿಲ್ಲದೆ ಇರುವುದೆಂದರ್ಥ. ಸದ್ಗುಣಿಯೇ, ನೀನು ಶೋಧಕನೆನ್ನೋ ನಿಜ. ನಿನ್ನ ಗುರಿ

ಮುಟ್ಟುವ ಯತ್ನದಲ್ಲಿ ನಿನ್ನ ಸುತ್ತುಮುತ್ತಲು ನಿನ್ನ ಕಣ್ಣ ಮುಂದೆ ಇರುವ ವಸ್ತುಗಳೇ ನಿನಗೆ ಗೋಚರಿಸುವುದಿಲ್ಲ."

"ನನಗೆ ಅರ್ಥ ವಾಗುವುದಿಲ್ಲ."

"ಸಜ್ಜನನೇ! ಅನೇಕ ವರುಷಗಳ ಹಿಂದೆ ನೀನು ಈ ನದಿಗೆ ಬಂದೆ. ಅದರ ದಂಡೆಯಲ್ಲಿ ಮಲಗಿದವನೊಬ್ಬನನ್ನು ಕಂಡೆಯಲ್ಲ! ಅವನು ನಿದ್ರಾಸಕ್ತನಾಗಿದ್ದುದರಿಂದ ನೀನು ಕಾವಲು ಮಾಡಲು ಕುಳಿತೆ. ಆದರೆ ನಿನಗೆ ಅವನ ಗುರುತಾಗಲಿಲ್ಲ, ಗೋವಿಂದಾ.''

ಆಶ್ಚರ್ಯದಿಂದ ಭಿಕ್ಷು ದೋಣಿಯವನನ್ನು ಎವೆಯಿಕ್ಕದೆ ದಿಟ್ಟಿಸಿದ. ಆ ಮೇಲೆ ಅಳುಕುತ್ತ ಕೇಳಿದ: "ನೀನು ಸಿದ್ಧಾರ್ಥನೋ? ಈಗಲೂ ನಾನು ನಿನ್ನನ್ನು ಗುರುತಿಸಲಿಲ್ಲ. ನಿನ್ನನ್ನು ನೋಡಲು ಸಂತೋಷವಾಗುತ್ತದೆ. ಸಿದ್ಧಾರ್ಥ, ಇದು ಬಹಳ ಸಂತೋಷದ ಗಳಿಗೆ! ಮಿತ್ರಾ, ನೀನು ಬಹಳ ಬದಲಾಗಿದ್ದೀಯಾ. ನೀನೀಗ ದೋಣಿಗಾರನಾಗಿರುವೆಯಾ?"

ಸಿದ್ಧಾರ್ಥ ಆನಂದ ಲಹರಿಯಿಂದ ನಕ್ಕು ನುಡಿದ: "ಹೌದು. ನಾನು ದೋಣಿಗಾರನಾಗಿದ್ದೇನೆ. ಅನೇಕರು ಅನೇಕ ರೀತಿ ಬದಲಾಗಬೇಕಾಗುತ್ತದೆ. ಅನೇಕ ವೇಷಗಳನ್ನು ಧರಿಸಬೇಕಾಗುತ್ತದೆ. ನಾನು ಅಂತಹ ಮನುಷ್ಯರಲ್ಲೊಬ್ಬ. ನಿನಗೆ ಸ್ವಾಗತ. ಈ ಹೊತ್ತು ನನ್ನ ಗುಡಿಸಲಿಗೆ ಬಾ."

ಗೋವಿಂದ ರಾತ್ರಿ ಆ ಗುಡಿಸಲಿನಲ್ಲಿ ಉಳಿದುಕೊಂಡ. ಅವನಿಗೆ ಮಲಗಲು ವಾಸುದೇವನ ಹಾಸಿಗೆಯನ್ನು ಸಿದ್ಧಾರ್ಥ ಒದಗಿಸಿದ. ಬಾಲ್ಯ ಮಿತ್ರರಿಬ್ಬರೂ ಬಹಳ ರಾತ್ರಿಯ ವರೆಗೆ ಮಾತನಾಡುತ್ತ ಕುಳಿತರು. ಸಿದ್ಧಾರ್ಥ ತನ್ನ ಜೀವನದ ಆದ್ಯಂತ ಕಥೆ, ವ್ಯಥೆಯನ್ನು ವಿವರಿಸಿದ.

ಮರುದಿನ ಮುಂಜಾನೆ ಹೊರಡಲು ಹೊತ್ತಾದಾಗ ಗೋವಿಂದ ಅನುಮಾನದಿಂದ ಪ್ರಶ್ನಿಸಿದ: "ಸಿದ್ಧಾರ್ಥ! ನನ್ನ ಹಾದಿ ಹಿಡಿದು ಹೋಗುವ ಮೊದಲು ಒಂದು ಪ್ರಶ್ನೆ ಕೇಳಲಿಚ್ಛಿಸುತ್ತೇನೆ. ಸತ್ಕರ್ಮ ಹಾಗು ಸದಾಚಾರದಿಂದ ಬಾಳಿ ಬದುಕಲು ನೆರವಾಗುವ ಸಿದ್ಧಾಂತ, ನಂಬಿಗೆ, ವಿದ್ಯೆಗಳನ್ನೇನಾದರೂ ನೀನು ಬೋಧಿಸುತ್ತೀಯಾ?

ಸಿದ್ಧಾರ್ಥ ಉತ್ತರವಿತ್ತ: "ಮಿತ್ರಾ! ನನ್ನ ತಾರುಣ್ಯದಲ್ಲೂ, ಇಬ್ಬರೂ ಆ ಯತಿಗಳೊಂದಿಗೆ ಕಾಡಿನಲ್ಲಿ ಇದ್ದಾಗಲೂ ಸಿದ್ಧಾಂತ ಹಾಗೂ ಗುರುಗಳ

ಮೇಲೆ ನನಗೆ ಅಪನಂಬಿಕೆ ಇದ್ದುದು ನಿನಗೆ ಗೊತ್ತು. ಅದನ್ನೆಲ್ಲ ತ್ಯಜಿಸಿ ಹೋದೆ. ಈಗಲೂ ನನ್ನ ಮನೋಸ್ಥಿತಿ ಹಾಗೇ ಇದೆ. ಅಂದಿನಿಂದ ನಾನು ಅನೇಕ ಗುರುಗಳ ಆಶ್ರಯ ಪಡೆದಿದ್ದೇನೆನ್ನೋ ನಿಜ. ಅತ್ಯಂತ ಲಾವಣ್ಯ ವತಿಯಾದ ಗಣಿಕೆಯೂ ಶ್ರೀಮಂತ ವರ್ತಕನೂ ಮತ್ತೊಬ್ಬ ಜೂಜುಗಾರನೂ ಬಹಳ ವರುಷಗಳ ವರೆಗೆ ನನ್ನ ಗುರುಗಳಾಗಿದ್ದರು. ಒಮ್ಮೆ ಅಲೆವ ಬುದ್ಧ ಭಿಕ್ಷುವೊಬ್ಬ ಕೂಡಾ ನನ್ನ ಗುರುವಾದ. ನಾನು ಅರಣ್ಯದಲ್ಲಿ ನಿದ್ರಾಸಕ್ತ ನಾದಾಗ ಅವನು ನನ್ನ ಸಮೀಪ ಕುಳಿತ. ಅವನಿಂದಲೂ ನಾನು ಕೆಲ ವೊಂದು ವಿಷಯವನ್ನು ಕಲಿತುಕೊಂಡೆ. ಅದಕ್ಕಾಗಿ ನಾನು ಅವನಿಗೆ ಋಣಿ. ಆದರೆ ಎಲ್ಲಕ್ಕಿಂತಲೂ ಈ ನದಿಯಿಂದ ಹಾಗೂ ಮೊದಲಿದ್ದ ದೋಣಿಗಾರ ವಾಸುದೇವನಿಂದ ನಾನು ಕಲಿತುದುದೇ ಹೆಚ್ಚು. ಅವನು ಸಾದಾ ಮನುಷ್ಯ. ತತ್ವಜ್ಞಾನಿಯಲ್ಲ. ಆದರೆ ಗೌತಮನಂತೆ ಅವನಿಗೂ ಮೂಲ ಧರ್ಮದ ಸಾಕ್ಷಾತ್ಕಾರವಾಗಿದೆ. ಅವನು ಪವಿತ್ರ, ಸಾಧು ಸತ್ಪುರುಷ.''

"ಸಿದ್ಧಾರ್ಥ! ನೀನಿನ್ನೂ ಸ್ವಲ್ಪ ಅಪಹಾಸ್ಯಮಾಡುತ್ತಿರುವಂತೆ ತೋರು ತ್ತದೆ. ನೀನು ಯಾವ ಗುರುವನ್ನೂ ಅನುಸರಿಸಿಲ್ಲ ಎಂದು ಬಲ್ಲೆ. ನಿನ್ನ ಮಾತುಗಳನ್ನು ನಂಬುವೆ. ಆದರೆ ಯಾವುದಾದರೊಂದು ಸಿದ್ಧಾಂತವಿಲ್ಲದೇ ಇದ್ದರೆ ನಿನ್ನಲ್ಲೇ ಕೆಲವು ವಿಚಾರಗಳಾದರೂ ಇವೆಯಲ್ಲ? ಬಾಳಿ ಬದುಕಲು ಸಹಾಯವಾದ ಕೆಲವು ವಿದ್ಯೆಗಳನ್ನಾದರೂ ನೀನು ಹುಡುಕಿಲ್ಲವೇ? ಅದ ನ್ನೇನಾದರೂ ಸ್ವಲ್ಪ ಹೇಳಿದರೆ ತುಂಬಾ ಸಂತೋಷಪಡುತ್ತೇನೆ."

"ಹೌದು, ಗೋವಿಂದಾ. ಅನೇಕ ವಿಚಾರಗಳು ಸುಳಿದಿವೆ. ಅಲ್ಲಿ ಇಲ್ಲಿ ವಿದ್ಯೆ ಗಳಿಸಿದೆ. ಹೃದಯದಲ್ಲಿ ಜೀವವಿದೆಯೆಂದು ಭಾಸವಾಗುವ ಹಾಗೆ ಒಮ್ಮೊಮ್ಮೆ, ಒಂದು ಕ್ಷಣ ಅಥವಾ ಒಂದು ದಿನ ಜ್ಞಾನವನ್ನು ಅನುಭವಿಸಿ ರುವೆ. ನಾನು ಅನೇಕ ವಿಚಾರಗಳನ್ನು ಚಿಂತಿಸಿದ್ದೇನೆ. ಆದರೆ ಅವನ್ನು ನಿನಗೆ ವಿವರಿಸಿ ಹೇಳುವುದು ಕಠಿಣ. ಜ್ಞಾನವನ್ನು ವಿವರಿಸಿ ಹೇಳಲು ಬರುವಂತಿಲ್ಲ. ಜ್ಞಾನಿಯು ಅದನ್ನು ತಿಳಿಸಲೆತ್ನಿಸಿದರೆ ಅದು ಹುಚ್ಚುಚ್ಚಾಗಿ ತೋರುತ್ತದೆ.''

"ಮತ್ತೆ ಅಪಹಾಸ್ಯ ಮಾಡುತಿದ್ದೀಯಾ ?''

" ಇಲ್ಲ. ನಾನು ಶೋಧಿಸಿದುದನ್ನೇ ನಿನಗೆ ಹೇಳುತಿದ್ದೇನೆ. ವಿದ್ಯೆಯ

ನ್ನು ಮತ್ತೊಬ್ಬರಿಗೆ ಹೇಳಿಕೊಡಬಹುದು, ಜ್ಞಾನವನ್ನಲ್ಲ. ಅದು ಸಿಕ್ಕೀತು. ಅದು ಬಾಳನ್ನು ಬೆಳಗಿಸೀತು. ಅದರಿಂದ ಪವಾಡಗಳನ್ನು ಮಾಡಿ ತೋರಿಸಬಹುದು. ಆದರೆ ತಿಳಿಸಿ, ಬೋಧಿಸಲು ಸಾಧ್ಯವಿಲ್ಲ. ಈ ಅಪನಂಬಿಗೆ ಎಳೆತನದಿಂದಲೂ ನನ್ನಲ್ಲಿತ್ತು. ಆದುದರಿಂದಲೇ ಅದು ಗುರುಗಳಿಂದ ನನ್ನನ್ನು ಹೊಡೆದಟ್ಟಿತು. ಇನ್ನೊಂದು ವಿಚಾರಕ್ಕೂ ನಾನು ಬಂದಿದ್ದೇನೆ ಅದು ಹುಚ್ಚುತನವೆಂದು ನೀನು ಹೇಳು. ಚಿಂತಿಲ್ಲ. ನನ್ನ ವಿಚಾರ ಮಾತ್ರ ಹೀಗಿದೆ ನೋಡು. ಸತ್ಯದಂತೆ ಮಿಥ್ಯವೂ ಸತ್ಯ. ಸತ್ಯ ಒಂದು ಮುಖ. ಶಬ್ದಗಳಿಂದ ಹೇಳುವಂತಹ ಪ್ರತಿಯೊಂದು ವಿಚಾರವೂ ಒಮ್ಮುಖವಾಗಿದೆ. ಅದು ಅರ್ಧ ಸತ್ಯ ಮಾತ್ರ. ಅದರಿಂದ ಎಲ್ಲವನ್ನೂ ಹೇಳಿದಂತಾಗಲಿಲ್ಲ. ಅದು ಪರಿಪೂರ್ಣವಲ್ಲ ಮಹಾತ್ಮನಾದ ಬುದ್ಧನು ಪ್ರಪಂಚದ ಬೋಧೆ ಮಾಡುತಿದ್ದಾಗ ಕೂಡಾ ಅದನ್ನು ಸಂಸಾರ ಮತ್ತು ನಿರ್ವಾಣ, ಸತ್ಯ ಮತ್ತು ಮಿಥ್ಯ, ದುಃಖ ಮತ್ತು ಮೋಕ್ಷಗಳೆಂದು ವಿಂಗಡಿಸಲೇ ಬೇಕಾಯಿತು. ಹಾಗೆ ಮಾಡದೆ ಬೇರೆ ಉಪಾಯವಿಲ್ಲ. ಬೋಧಿಸುವವರಿಗೆ ಅನ್ಯ ಮಾರ್ಗವಿಲ್ಲ. ಆದರೆ ನಮ್ಮೊಳಗೆ ಹಾಗೂ ನಮ್ಮ ಸುತ್ತುಮುತ್ತಲಿರುವ ಪ್ರಪಂಚ ಎಂದೆಂದೂ ಒಮ್ಮೈಯುಳ್ಳದ್ದಲ್ಲ. ಮನುಷ್ಯನು ಅಥವಾ ಒಂದು ಕರ್ಮ, ಸಂಪೂರ್ಣ ಸಂಸಾರವೂ ಅಲ್ಲ, ಅಥವಾ ಸಂಪೂರ್ಣ ನಿರ್ವಾಣವೂ ಅಲ್ಲ. ಮನುಷ್ಯನೊಬ್ಬ ಪೂರಾ ಸಾಧು ಸತ್ಪುರುಷನೂ ಅಲ್ಲ. ಪೂರ್ಣ ಪಾಪಿಯೂ ಅಲ್ಲ. ನಮಗೆ ಹಾಗೆ ಕಾಣುತ್ತದೆ ಮಾತ್ರ. ಏಕೆಂದರೆ ಕಾಲವು ವಾಸ್ತವಿಕ ಎಂಬ ಮಾಯೆ ನಮ್ಮನ್ನು ಮುಸುಕಿದೆ. ಕಾಲವು ವಾಸ್ತವಿಕವಲ್ಲ. ಪದೇಪದೇ ಇದನ್ನು ತಿಳಿದಿದ್ದೇನೆ. ಕಾಲವು ಸ್ಥಿರವಾಗಿರದಿದ್ದರೆ ಈ ಪ್ರಪಂಚ ಮಾತ್ರ ಅನಾದ್ಯನಂತತ್ವ, ದುಃಖ ಮತ್ತು ಆನಂದ, ಒಳ್ಳೇದು ಮತ್ತು ಕೆಟ್ಟದು, ಇವುಗಳ ಪ್ರತ್ಯೇಕೀಕರಣವೂ ಒಂದು ಮಾಯೆಯೇ ಸರಿ."

"ಅದು ಹೇಗೆ?" ಎಂದು ಗೋವಿಂದ ಒಗಟು ಕೇಳಿದವರಂತೆ ತಬ್ಬಿಬ್ಬಾಗಿ ನುಡಿದ.

"ಮಿತ್ರಾ, ನಾನು ಪಾಪಿ ! ನೀನೂ ಪಾಪಿ ! ಆದರೆ ಒಂದಲ್ಲದಿದ್ದರೆ ಇನ್ನೊಂದು ದಿನ ಈ ಪಾಪಿ ಪುನಃ ಬಹ್ಮತ್ವ ಹೊಂದಲು, ನಿರ್ವಾಣ ಸಾಧಿಸಲು, ಬುದ್ಧನಾಗಲು ಸಾಧ್ಯವಿದೆ. ಈಗ ಈ "ಒಂದಲ್ಲದಿದ್ದರೆ

ಇನ್ನೊಂದು ದಿನ" ಎಂಬುದು ಮಾಯೆ. ಅದು ಕೇವಲ ಹೋಲಿಕೆ ಅಷ್ಟೆ. ಪಾಪಿಯು ಬುದ್ಧನಾಗುವ ದಾರಿಯಲ್ಲಿಲ್ಲ. ಅವನೇನೂ ವಿಕಾಸ ಹೊಂದುತ್ತಾ ಇಲ್ಲ. ಆದರೆ ನಮ್ಮ ಬುದ್ಧಿಗೆ ಮಾತ್ರ ಹಾಗೆ ವಿಚಾರ ಮಾಡದೆ ಬೇರೆ ಉಪಾಯವಿಲ್ಲ. ನಿಜವಾಗಿ ನೋಡಿದರೆ ಪಾಪಿಯಲ್ಲೇ ಬುದ್ಧನಿದ್ದಾನೆ. ಅವನ ಭವಿಷ್ಯವು ಅವನಲ್ಲೇ ಇದೆ. ಅಡಗಿದ ಆ ಬುದ್ಧನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ನನ್ನಲ್ಲಿ, ನಿನ್ನಲ್ಲಿ ಎಲ್ಲರಲ್ಲೂ ಹಾಗೆಯೇ. ಈ ಪ್ರಪಂಚ ಅಪೂರ್ಣವಲ್ಲ. ಅಥವಾ ಯಾವುದಾದರೊಂದು ದೊಡ್ಡ ಮಾರ್ಗದ ಮೂಲಕ ಅದು ಪರಿಪೂರ್ಣತ್ವದ ತಿರುಗುಮುರುಗಿನೊಳಗಿಲ್ಲ. ಅದು ಪ್ರತಿ ಕ್ಷಣ ಕ್ಷಣದಲ್ಲೂ ಪರಿಪೂರ್ಣವಾಗಿಯೇ ಇದೆ. ಪ್ರತಿಯೊಂದು ಪಾಪದೊಂದಿಗೆ ದಯಾಗುಣವಿದೆ. ಮಕ್ಕಳಲ್ಲೂ ಮುಂದಿನ ಮುದುಕತನವಿದ್ದೇ ಇದೆ. ಹುಟ್ಟಿದವನು ಸಾವನ್ನು ಹೊತ್ತುಕೊಂಡೇ ಇದ್ದಾನೆ. ಸಾಯುವವರಲ್ಲಿ ಶಾಶ್ವತ ಜೀವನವೂ ಇದೆ. ಒಂದು ಪಥದಲ್ಲಿ ಇನ್ನೊಬ್ಬನೆಷ್ಟು ದೂರವಿದ್ದಾನೆಂದು ಮತ್ತೊಬ್ಬನಿಗೆ ಗೊತ್ತಾಗುವುದಿಲ್ಲ. ಕಳ್ಳ ಕಾಕರಲ್ಲೂ, ಜೂಜುಗಾರರಲ್ಲೂ ಬುದ್ಧನಿದ್ದಾನೆ. ಬ್ರಾಹ್ಮಣನಲ್ಲೂ ಕಳ್ಳನಿದ್ದಾನೆ. ಯೋಗಸ್ಥನಾದಾಗ ಕಾಲದ ಆಚೆ ನಿಲುಕಲು ಸಾಧ್ಯ ಭೂತ, ವರ್ತಮಾನ, ಮತ್ತು ಭವಿಷ್ಯತ್ಕಾಲಗಳನ್ನು ಏಕಕಾಲದಲ್ಲಿ ನೋಡಬಹುದು. ಆಗ ಎಲ್ಲವೂ ಒಳ್ಳೇದು, ಪರಿಪೂರ್ಣ, ಬ್ರಹ್ಮ ಎಂಬುದರ ದರ್ಶನಲಾಭವಾಗುತ್ತದೆ. ಆದುದರಿಂದ ಯಾವುದು ಇರುವುದೋ ಅದು ಒಳ್ಳೇದೇ. ಅದು ಜೀವನ್ಮರಣ, ಪಾಪ ಪುಣ್ಯ, ಜ್ಞಾನ ಅಜ್ಞಾನ, ಯಾವುದಾದರೂ ಸರಿಯೇ. ಎಲ್ಲವೂ ಆವಶ್ಯಕ. ಎಲ್ಲಕ್ಕೂ ನಾನು ಸಿದ್ಧನಾಗಿರಬೇಕು. ಪ್ರೇಮದ ಸಹಾನುಭೂತಿಯಿಂದ ಕಾಣಬೇಕು. ಹಾಗಿದ್ದರ ಎಲ್ಲವೂ ಸರಿಹೋಗುತ್ತದೆ. ನನಗೆ ಯಾವ ಅಪಾಯವೂ ಇಲ್ಲ. ಪಾಪ ಮಾಡುವುದು ನನ್ನ ದೇಹ ಬುದ್ಧಿಗಳೆರಡಕ್ಕೂ ಅಗತ್ಯವಾಗಿತ್ತು. ಇಂದ್ರಿಯ ಸುಖಾಪೇಕ್ಷೆಯಾಗಿದ್ದೆ. ಆಸ್ತಿಪಾಸ್ತಿ ಗಳಿಸಬೇಕಾಗಿತ್ತು. ಅಸಹ್ಯ ಹಾಗೂ ಹತಾಶೆ ಪಡುವುದೂ ಅವಶ್ಯವಿತ್ತು. ಏಕೆಂದರೆ ಪ್ರಪ್ರಂಚವನ್ನು ಪ್ರೀತಿಸಲು, ನನ್ನಿಚ್ಛೆಯಂತೆ ಕಲ್ಪಿಸದೆ ಇರಲು, ಅದು ಇದ್ದಂತೆ ನೋಡಲು, ಪ್ರೀತಿಸಿ ಅದರ ಒಂದಂಶವಾಗಲು ಅವೆಲ್ಲ ಅನುಭವಗಳನ್ನು ನಾನು ಪ್ರತಿಭಟಿಸಬಾರದೆಂದು ಕಲಿತುಕೊಳ್ಳಬೇ

ಕಾಯಿತು. ಇವೆಲ್ಲ ನನ್ನ ತಲೆಯಲ್ಲಿ ಸುಳಿಯುತ್ತಿರುವ ವಿಚಾರಗಳು ಗೋವಿಂದಾ.''

ಸಿದ್ಧಾರ್ಥ ಬಗ್ಗಿ ಒಂದು ಕಲ್ಲನ್ನು ಹೆಕ್ಕಿ ಕೈಯಲ್ಲಿ ಹಿಡಿದುಕೊಂಡ. ಅದನ್ನು ತಿರುವುತ್ತ ಹೇಳಿದ: "ಇದು ಕಲ್ಲು. ಆದರೆ ಕೆಲ ಕಾಲ ಕಳೆದ ಮೇಲೆ ಇದು ಮಣ್ಣಾಗುತ್ತದೆ. ಮಣ್ಣಿನಿಂದ ಅದು ಗಿಡವಾಗುತ್ತದೆ. ಪ್ರಾಣಿ ಅಥವಾ ಮನುಷ್ಯನೂ ಆಗುತ್ತದೆ. ಹಿಂದಿನ ದಿನಗಳಲ್ಲಾದರೆ ಇದು ಬರಿ ಕಲ್ಲು, ಇದಕ್ಕೆ ಬೆಲೆಯಿಲ್ಲ, ಇದು ಮಾಯಾ ಪ್ರಪಂಚಕ್ಕೆ ಸೇರಿದೆ, ಬದಲಾವಣೆಯ ಚಕ್ರದಲ್ಲಿ ಅದು ಚೈತನ್ಯ ಶಕ್ತಿ, ಮನುಷ್ಯನಾಗಲೂ ಬಹುದು ಎಂದು ಹೇಳುತಿದ್ದೆ. ಆದರೆ ಈಗ ಇದು ಕಲ್ಲು ಕಲ್ಲೇ. ಆದರೆ ಇದು ಪ್ರಾಣಿಯೂ ಹೌದು, ದೇವರೂ ಹೌದು, ಬುದ್ಧನೂ ಹೌದು ಎಂದು ನನ್ನ ವಿಚಾರ. ಅದು ಹಿಂದೆ ಒಂದು ರೀತಿಯಿತ್ತು. ಇನ್ನು ಮುಂದೆ ಇನ್ನೊಂದು ರೀತಿ ಆಗುತ್ತದೆಂಬ ಭಾವನೆಯಿಂದ ನಾನು ಅದನ್ನು ಪ್ರೀತಿಸುವುದಾಗಲೀ ಪೂಜಿಸುವುದಾಗಲೀ ಮಾಡುವುದಲ್ಲ. ಅದು ಎಲ್ಲವೂ ಆಗಿತ್ತು. ಎಲ್ಲವೂ ಆಗಿಯೇ ಇದೆ. ಈಗ ಅದು ಕಲ್ಲಾಗಿರುವುದರಿಂದಲೂ ನನಗೆ ಅದರ ಮೇಲೆ ಪ್ರೀತಿ. ಅದರ ಗೆರೆ ಗುರುತುಗಳು, ಕೊರಕಲುಗಳು, ಹಳದಿ ಕಂದು ಬಣ್ಣಗಳು ನನಗೆ ಅಮೂಲ್ಯ. ಅದರ ಕಾಠಿನ್ಯದಲ್ಲೂ ಒಂದು ಅರ್ಥವಿದೆ. ಅದನ್ನು ಬೆರಳಿನಿಂದ ಸಿಡಿದಾಗ ಆಗುವ ನಾನಾ ನಾದಗಳಿಗೂ ಬೆಲೆ ಅರ್ಥಗಳಿವೆ. ಎಣ್ಣೆ ಅಥವಾ ಸಾಬೂನಿನಷ್ಟು ಮೃದುವಾದ ಕಲ್ಲುಗಳಿವೆ. ಎಲೆ ಅಥವಾ ಉಸುಕಿನಂತೆ ಕಾಣುವ ಕಲ್ಲುಗಳಿವೆ. ಒಂದು ಮತ್ತೊಂದಕ್ಕಿಂತ ಭಿನ್ನ, ಪ್ರತಿಯೊಂದು ಓಂಕಾರದ ಪೂಜೆ ಮಾಡುತ್ತದೆ. ಪ್ರತಿಯೊಂದೂ ಬ್ರಹ್ಮ. ಆದರೆ ಅದೇ ಕಾಲಕ್ಕೆ ಅದು ಎಣ್ಣೆ ಅಥವಾ ಸಾಬೂನಿನಷ್ಟು ಮೃದುವಿದ್ದರೂ ಕಲ್ಲೂ ಹೌದು. ಅದನ್ನು ಕಂಡು ನನಗೆ ಸಂತೋಷವಾಗುತ್ತದೆ. ಅದನ್ನು ಪೂಜಿಸಬೇಕೆಂದೆನಿಸುತ್ತದೆ. ಆದರೆ ಇನ್ನು ಆ ವಿಷಯದ ಬಗೆ ಹೆಚ್ಚು ಹೇಳಲಾರೆ. ಶಬ್ದಗಳಿಂದ ವಿಚಾರಗಳನ್ನು ಪೂರ್ಣ ತಿಳಿಸಲಾಗದು. ಶಬ್ದಗಳು ಉಚ್ಚರಿಸಲ್ಪಟ್ಟ ಕೂಡಲೇ ಅವುಗಳ ಸ್ವರೂಪ ಬೇರೆಯೇ ಆಗುತ್ತದೆ; ವಕ್ರವಾಗುತ್ತದೆ; ಹುಚ್ಚಾಗಿ ಕಾಣುತ್ತದೆ. ಒಬ್ಬನಿಗೆ ಅಮೂಲ್ಯ ಹಾಗೂ ಜ್ಞಾನವಾಗಿ ದರ್ಶನವಾದುದು ಮತ್ತೊಬ್ಬನಿಗೆ ಅನರ್ಥವೆಂದು

ಗೋಚರಿಸುತ್ತಿರುವುದೂ ಸಹಜ."

ಗೋವಿಂದ ಮೌನವಾಗಿ ಆಲಿಸುತಿದ್ದ.

ಸ್ವಲ್ಪ ವೇಳೆಯಾದ ಬಳಿಕ ಅವನು ಕೇಳಿದ: 'ನೀನು ಈ ಕಲ್ಲಿನ ಬಗ್ಗೆ ಏಕೆ ಹೇಳಿದೆ?''

"ಉದ್ದೇಶಪೂರ್ವಕವಾಗಿ ಹೇಳಲಿಲ್ಲ. ಈ ಕಲ್ಲು, ನದಿ, ಹಾಗೂ ಸಮಸ್ತ ವಸ್ತುಗಳನ್ನೂ ನಾನು ಪ್ರೀತಿಸುತ್ತೇನೆ ಮತ್ತು ಅವುಗಳಿಂದ ನಾವು ಅರಿಯ ಬಹುದೆಂಬುದಕ್ಕೆ ಈ ಕಲ್ಲು ಒಂದು ಉದಾಹರಣೆ. ಅಷ್ಟೆ. ಒಂದು ಕಲ್ಲು, ಮರ, ಅದರ ತೊಗಟೆಯನ್ನೂ ನಾನು ಪ್ರೀತಿಸಬಲ್ಲೆ. ಇವೆಲ್ಲ ವಸ್ತು ಸ್ವರೂಪಗಳು ಅವುಗಳನ್ನು ಪ್ರೀತಿಸಬಹುದಾಗಿದೆ. ಆದರೆ ಶಬ್ದವನ್ನು ಮೋಹಿಸಲಾಗದು. ಆದುದರಿಂದಲೇ ತತ್ವ ಬೋಧೆ ನನಗೆ ನಿರುಪಯೋಗಿ. ಅವಕ್ಕೆ ಮೃದುತ್ವವೂ ಇಲ್ಲ. ಕಾಠಿನ್ಯವೂ ಇಲ್ಲ ಬಣ್ಣಗಳಿಲ್ಲ. ಮೂಲೆಗಳಿಲ್ಲ. ವಾಸನೆಯಿಲ್ಲ. ರುಚಿಯಿಲ್ಲ. ಪದಗಳ ಹೊರತು ಮತ್ತೇನೂ ಇಲ್ಲ. ಪ್ರಾಯಶಃ ಅವೇ ನಿನಗೆ ಶಾಂತಿ ದೊರೆಯದಂತೆ ತಡೆಹಿಡಿದಿವೆಯೆಂದು ತೋರುತ್ತದೆ. ಪ್ರಾಯಶಃ ಅತಿ ಶಬ್ದ ಮೋಹ ಆಯಿತೋ ಏನೋ! ಸಂಸಾರ ಮತ್ತು ನಿರ್ವಾಣ ಇವು ಕೇವಲ ಶಬ್ದಗಳು. ನಿರ್ವಾಣ ಒಂದು ವಸ್ತುವಲ್ಲ. ಅದೊಂದು ಪದ."

ಗೋವಿಂದ ಸೂಚಿಸಿದ: "ನಿರ್ವಾಣ ಒಂದು ಪದ ಮಾತ್ರವಲ್ಲ. ಅದೊಂದು ವಿಚಾರವೂ ಹೌದು."

ಸಿದ್ಧಾರ್ಥ ಹೇಳಿದ: "ಹೌದು. ಅದೊಂದು ವಿಚಾರವಾಗಿರಬಹುದು. ಆದರೆ ಮಿತ್ರಾ, ವಿಚಾರ ಮತ್ತು ಶಬ್ದಗಳಿಗೇನೂ ಬಹಳ ಭೇದವಿಲ್ಲ. ವಿಚಾರಗಳಿಗೂ ನಾನು ಬಹಳ ಮಹತ್ವ ಕೊಡುವುದಿಲ್ಲ. ನಾನು ವಸ್ತುಗಳಿಗೆ ಮಹತ್ವ ಕೊಡುತ್ತೇನೆ. ಈಗ ಉದಾಹರಣೆಗಾಗಿ, ಮೊದಲು ಇಲ್ಲಿದ್ದ ಒಬ್ಬ ದೋಣಿಗಾರನ ವಿಷಯ ಕೇಳು. ಅವನು ಪವಿತ್ರ ಜೀವಿ. ಈ ನದಿಯಲ್ಲೇ ಅವನಿಗೆ ನಂಬಿಗೆ. ನದಿಯೇ ತನ್ನೊಡನೆ ಮಾತನಾಡುತ್ತಿದೆಯೆಂದು ಅವನು ಕಂಡುಕೊಂಡ. ಅದರಿಂದಲೇ ಅವನು ಅರಿತ. ಅದೇ ಅವನಿಗೆ ಗುರು. ನದಿಯೇ ದೇವರಂತೆ ಅವನಿಗೆ ತೋರಿತು. ಗಾಳಿ, ಮೋಡ, ಪಶು ಪಕ್ಷಿಗಳೂ ಅಷ್ಟೇ ದೇವಾಂಶ ಸಂಭೂತಗಳು ಮತ್ತು ನದಿಯಂತೆ ಕಲಿಸ

ಬಲ್ಲುವು ಎಂದು ಅನೇಕ ವರುಷಗಳ ವರೆಗೆ ಅವನು ಅರಿತಿರಲಿಲ್ಲ. ಆದರೆ ಈ ಪವಿತ್ರಾತ್ಮನು ಕಾಡಿಗೆ ಹೊರಟು ಹೋದಾಗ ಸರ್ವಜ್ಞನಾಗಿದ್ದ. ಗುರುಗಳಿಲ್ಲದೆ, ಗ್ರಂಥಗಳನ್ನೋದದೆ, ನನನಿನಗಿಂತಲೂ ಹೆಚ್ಚು ಸಂಗತಿಗಳನ್ನು ಅರಿತವನಾಗಿದ್ದ. ಏಕೆಂದರೆ ಆ ನದಿಯ ಮೇಲೆಯೇ ಅವನಿಗೆ ನಂಬಿಗೆ"

ಗೋವಿಂದ ಪ್ರಶ್ನಿಸಿದ: "ನೀನು ಹೇಳುವ ಈ ವಸ್ತು ಸ್ಥಿರವಾದುವೇ? ಸ್ವಶಕ್ತಿ ಉಳ್ಳುದೇ ? ಅದೂ ಮಾಯೆಯ ಭ್ರಮೆ, ಒಂದು ಮೂರ್ತಿ, ಮತ್ತು ಸ್ವರೂಪ ಮಾತ್ರವಾಗಿರಲಿಕ್ಕಿಲ್ಲವೇ ? ನೀನು ಹೇಳಿದ ಕಲ್ಲು, ಮರ, ಇವೆಲ್ಲ ಸ್ಥಿರವೇ ?"

"ಅದಕ್ಕಾಗಿ ನಾನು ಚಿಂತಿಸುವುದಿಲ್ಲ'' ಎಂದು ಸಿದ್ಧಾರ್ಥ ಉತ್ತರವಿತ್ತು ಮಾತು ಮುಂದುವರಿಸಿದ. "ಅವು ಭ್ರಮೆಯಾಗಿದ್ದರೆ ನಾನೂ ಒಂದು ಭ್ರಮೆಯೇ ಸರಿ. ಏಕೆಂದರೆ ಅವೂ ನನ್ನಂತೆಯೇ ಸ್ವಭಾವವುಳ್ಳವುಗಳು. ನನ್ನ ಗುಣಗಳುಳ್ಳವುಗಳಾಗಿರುವುದರಿಂದಲೇ ಪ್ರೀತಿಸುತ್ತೇನೆ. ಮತ್ತು ಪೂಜಿಸುತ್ತೇನೆ. ಆ ಕಾರಣದಿಂದಲೇ ಅದು ನನ್ನ ಪ್ರೀತ್ಯಾಸ್ಪದವಾಗಿದೆ. ಗೋವಿಂದಾ, ಪ್ರಪಂಚದಲ್ಲಿ ಪ್ರೇಮವೇ ಅತ್ಯಂತ ಮಹತ್ವವಾದ ವಸ್ತು. ನನ್ನ ಈ ಸಿದ್ಧಾಂತ ಕೇಳಿ ನೀನೂ ನಗಲೂ ಬಹುದು. ದೊಡ್ಡ ದೊಡ್ಡ ತತ್ವ ಜ್ಞಾನಿಗಳು ಈ ಪ್ರಪಂಚವನ್ನು ವಿವರಿಸಲು ಹಾಗೂ ತಿರಸ್ಕರಿಸಲು ಪರೀಕ್ಷೆಗೆ ಬಹಳ ಮಹತ್ವ ಕೊಡುವರು. ಆದರೆ ಈ ಪ್ರಪಂಚವನ್ನು ಪ್ರೀತಿಸುವುದೇ ಮಹತ್ವದ ಸಂಗತಿ. ತುಚ್ಛೀಕಾರ, ಪರಸ್ಪರ ದ್ವೇಷಿಸುವುದರಲ್ಲೂ ಅರ್ಥವಿಲ್ಲ. ಪ್ರಪಂಚ ಹಾಗೂ ನಮ್ಮ ನಮ್ಮನ್ನು ಪ್ರೀತ್ಯಾದರದಿಂದ ಕಾಣುವುದೇ ಮಹತ್ವವಾದುದು.''

'' ಮಿತ್ರಾ, ಇದು ನನಗೆ ಅರ್ಥವಾಗುತ್ತಿದೆ. ಗುಣನಿಧಿಯಾದ ಬುದ್ಧನು ಅದನ್ನೇ ಭ್ರಮೆ ಎಂದು ಹೇಳುತ್ತಾನೆ. ಅವನೂ ದಯೆ, ಸ್ನೈರಣೆ, ಸಹಾನುಭೂತಿ, ಸಹನೆಗಳನ್ನು ಬೋಧಿಸಿದ. ಆದರೆ ಪ್ರೇಮವನ್ನಲ್ಲ. ಈ ಪ್ರಾಪಂಚಿಕ ಪ್ರೇಮಬಂಧನದಲ್ಲಿ ಸಿಲುಕಬಾರದೆಂದು ನಮಗೆ ಹೇಳಿದ."

ಸಿದ್ಧಾರ್ಥ ಮುಗುಳು ನಗುತ್ತ ಹೇಳಿದ: "ನನಗೆ ಅದು ಗೊತ್ತಿದೆ. ಗೋವಿಂದಾ ನಾನದನ್ನು ಬಲ್ಲೆ. ಇದೋ, ಇದಕ್ಕೇ ಶಬ್ದ ಮೋಹ, ಅರ್ಥ ವಿಪರ್ಯಾಸ ಎಂದೆನಬೇಕು. ಪ್ರೇಮದ ಬಗ್ಗೆ ನಾನಾಡಿದ ಮಾತುಗಳು ತೋರಿಕೆಗೆ ಗೌತಮನ ಸಿದ್ಧಾಂತಕ್ಕೆ ವಿರುದ್ಧವಾಗಿ ಕಾಣಬಹುದು. ಆದುದರಿಂದಲೇ

ಈ ಶಬ್ದಗಳ ಮೇಲೆ ನಮಗೆ ಅಪನಂಬಿಗೆ. ಆದರೆ ನಿಜವಾಗಿ ನೋಡಿದರೆ ಆ ರೀತಿಯ ವಿರೋಧಾಭಾಸ ಭ್ರಮೆಯಾಗಿದೆ. ಗೌತಮನ ತತ್ವ ನನ್ನ ಹೇಳಿಕೆಗೆ ಸರಿಹೋಗುತ್ತದೆ. ಅವನು ಪ್ರೇಮ ಮಾಡದೇ ಹೇಗಿರಲಾರ ಹೇಳು ? ಮಾನವರು ಅಹಂಕಾರಿಗಳು ಮತ್ತು ಅಸ್ಥಿರರೆಂದು ಗೊತ್ತಿದ್ದರೂ ಮಾನವ ಕೋಟಿಯನ್ನೇ ಅಪಾರವಾಗಿ ಪ್ರೀತಿಸುತಿದ್ದಾನೆ. ಅವರಿಗೆ ನೆರವಾಗಲು ಅವರಿಗೆ ಬೋಧಿಸಲು ಒಂದು ಜೀವನವನ್ನೇ ಮುಡಿಪಾಗಿಟ್ಟಿದ್ದಾನಲ್ಲವೇ ? ಈ ಗುರು ಶ್ರೇಷ್ಠನ ವಿಚಾರದಲ್ಲಿ ಕೂಡಾ ಮಾತಿಗಿಂತ ಮನುಷ್ಯನಿಗೇ ನಾನು ಮಹತ್ವ ಕೊಡುತ್ತೇನೆ. ಅವನ ಮಾತುಗಳಿಗಿಂತ ಅವನ ಜೀವನ ಮತ್ತು ಕಾರ್ಯಗಳೇ ನನಗೆ ಮಹತ್ವವಾಗಿವೆ. ಅವನ ಅಭಿಮತಕ್ಕಿಂತ ಅವನ ಹಾವಭಾವಗಳಿಗೆ ಪ್ರಾಧಾನ್ಯ ಕೊಡುತ್ತೇನೆ ಮಾತು ಅಥವಾ ವಿಚಾರಗಳಲ್ಲಿ ಅಲ್ಲ, ಜೀವನ ಮತ್ತು ಕಾರ್ಯಗಳ ದೃಷ್ಟಿಯಿಂದ ಅವನೊಬ್ಬ ಮಹಾಪುರುಷನೆಂದು ನಾನು ಆದರಿಸುತ್ತೇನೆ. ”

ಇಬ್ಬರೂ ಮುದುಕರು ಬಹಳ ಹೊತ್ತಿನ ವರೆಗೆ ಮೌನವಾಗಿದ್ದರು. ಗೋವಿಂದ ಹೊರಡಲು ಸಿದ್ಧನಾದ ಮತ್ತು ಹೇಳಿದ: “ಸಿದ್ಧಾರ್ಥ! ನಿನ್ನ ವಿಚಾರಗಳಲ್ಲಿ ಅಲ್ಪಸ್ವಲ್ಪ ನನಗೆ ತಿಳಿಸಿದುದಕ್ಕಾಗಿ ತುಂಬಾ ಕೃತಜ್ಞ. ಅವುಗಳಲ್ಲಿ ಕೆಲವು ವಿಲಕ್ಷಣವಾಗಿವೆ. ನಾನು ತಕ್ಷಣ ಗ್ರಹಿಸಲಾರೆ. ಆದರೂ ಉಪಕಾರ. ದೀರ್ಘಾಯುಮಸ್ತು!”

ಅಂತರಂಗದೊಳಗೆ ಮಾತ್ರ ಗೋವಿಂದ ಅಂದುಕೊಂಡ: “ಸಿದ್ಧಾರ್ಥನೊಬ್ಬ ವಿಲಕ್ಷಣ ಪುರುಷ. ಅವನ ವಿಚಾರಗಳೂ ವಿಚಿತ್ರವಾಗಿವೆ. ಅವನ ವಿಚಾರಗಳು ಹುಚ್ಚುಚ್ಚಾಗಿ ತೋರುತ್ತವೆ. ಮಹಾತ್ಮನಾದ ಬುದ್ಧನ ಸಿದ್ಧಾಂತಗಳು ಇದಕ್ಕಿಂತ ಎಷ್ಟು ಭಿನ್ನ ! ಅವು ಸರಳ, ಸ್ಪಷ್ಟ, ಗ್ರಹಣ ಯೋಗ್ಯವಾಗಿವೆ. ಯಾವ ವೈಚಿತ್ರ್ಯವೂ ಅವರಲ್ಲಿಲ್ಲ. ಅಪಹಾಸ್ಯ ಮಾಡುವಂತಹುದೂ ಇಲ್ಲ. ಆದರೆ ಸಿದ್ಧಾರ್ಥನ ವಿಚಾರಗಳಿಗಿಂತಲೂ ಅವನ ಕೈ, ಕಾಲು, ಕಣ್ಣು ಹಣೆ, ನಗು, ನಮಸ್ಕಾರಗಳು, ನನ್ನ ಮೇಲೆ ಹೆಚ್ಚು ಪರಿಣಾಮ ಬೀರುತ್ತಿವೆ! ಬುದ್ಧನ ಮಹಾ ನಿರ್ವಾಣವಾದ ಮೇಲೆ ಇವನೊಬ್ಬ ಪವಿತ್ರಾತ್ಮನೆಂಬ ಭಾವನೆ ನನ್ನ ಹೃದಯದಲ್ಲಿ ಉಂಟಾದ ವ್ಯಕ್ತಿಯೊಬ್ಬನನ್ನೂ ನಾನು ಕಂಡಿರಲಿಲ್ಲ. ಆದರೆ ಸಿದ್ಧಾರ್ಥ ಅದಕ್ಕೆ ಅಪವಾದವಾಗಿರು

ವಸು. ಅವನ ವಿಚಾರಗಳು ವಿಚಿತ್ರ, ಮಾತುಗಳು ಹುಚ್ಚುಚ್ಚು ಇರಬಹುದು. ಆದರೆ ಆ ಕೃಪಾಕಟಾಕ್ಷ, ಕೈ, ಚರ್ಮ, ತಲೆಗೂದಲುಗಳೆಲ್ಲ ಪಾವಿತ್ರ್ಯ, ಗಾಂಭೀರ್ಯ, ನಯ ವಿನಯ, ಸಾತ್ವಿಕ ತೇಜಸ್ಸನ್ನು ಬೀರುತ್ತಿವೆ. ಬುದ್ಧನ ಹೊರತು ಈ ರೀತಿ ಇನ್ನೊಬ್ಬ ಯಾವ ಪುರುಷನನ್ನೂ ನಾನು ಕಂಡಿಲ್ಲ!"

ಗೋವಿಂದ ಈ ರೀತಿ ಮಾತನಾಡುತ್ತ ಅತ್ಯಂತ ಮಮತೆಯಿಂದ ಸಿದ್ಧಾರ್ಥನಿಗೆ ಶಿರಬಾಗಿ ನಮಸ್ಕರಿಸಿದ. ಅವನ ಹೃದಯ ಹೊಯ್ದಾಡುತಿತ್ತು. ಶಾಂತವಾಗಿ ಕುಳಿತ ಸಿದ್ಧಾರ್ಥನಿಗೆ ಮತ್ತೆ ಮತ್ತೆ ವಂದಿಸಿ ಇಂತೆಂದ:

"ಸಿದ್ಧಾರ್ಥ! ಈಗ ನಾವಿಬ್ಬರೂ ಮುದುಕರು. ಈ ಜೀವನದಲ್ಲಿ ನಾವಿನ್ನು ಪುನಃ ಒಬ್ಬರನ್ನೊಬ್ಬರು ಭೆಟ್ಟಿಯಾಗುವುದು ದುರ್ಲಭ. ನಿನಗೆ ಶಾಂತಿ ದೊರೆತಿದೆ. ಅದನ್ನು ನಾನು ಗಳಿಸಿಲ್ಲ. ನಾನು ಗ್ರಹಿಸಬಲ್ಲ ಅರ್ಥ ಮಾಡಿಕೊಳ್ಳಬಲ್ಲ ಯಾವುದಾದರೊಂದು ಮಾತನ್ನು ಹೇಳು! ನನ್ನ ದಾರಿಯ ಬುತ್ತಿಯಾಗಿ ಏನನ್ನಾದರೂ ಕೊಡು. ನನ್ನ ದಾರಿ ಕಠಿಣ ಮತ್ತು ಕಗ್ಗತ್ತಲೆಯೂ ಪಸರಿಸಿದೆ."

ಸಿದ್ಧಾರ್ಥ ಶಾಂತವಾಗಿಯೇ ಅವನ ಕಡೆ ಮುಗುಳು ನಗು ಬೀರುತ್ತ ನೋಡಿದ. ಚಿಂತೆ ಮತ್ತು ಹಂಬಲಗಳಿಂದ ಗೋವಿಂದ ಕೂಡಾ ಅವನನ್ನೇ ದಿಟ್ಟಿಸಿದ. ಸತತ ಶೋಧನೆ, ಸತತ ಅಪಜಯಗಳ ದುಃಖ ಗೋವಿಂದನ ನೋಟದಲ್ಲಿತ್ತು. ಸಿದ್ಧಾರ್ಥ ಅವನ್ನು ಕಂಡ ಮತ್ತು ನಗತೊಡಗಿದ.

"ಗೋವಿಂದಾ! ನನ್ನ ಹತ್ತಿರ ಬಾ. ಇನ್ನೂ ಹತ್ತಿರ. ಬಗ್ಗಿ ನನ್ನ ಹಣೆಯನ್ನು ಮುಟ್ಟು." ಎಂದು ಸಿದ್ಧಾರ್ಥ ಪಿಸುಗುಟ್ಟಿದ.

ಗೋವಿಂದ ಆಶ್ಚರ್ಯ ಪಟ್ಟರೂ ಅತ್ಯಂತ ಪ್ರೇಮದಿಂದಲೂ ಭವಿಷ್ಯಾರ್ಥಕ ಭಯದಿಂದಲೂ ಸಿದ್ಧಾರ್ಥನ ಮಾತಿಗೆ ವಿಧೇಯನಾದ. ಅವನ ಹತ್ತಿರ ಬಂದು ಅವನ ಹಣೆಯನ್ನು ಮುಟ್ಟಿದ. ಅವನು ಹಾಗೆ ಸಿದ್ಧಾರ್ಥನನ್ನು ಸ್ಪರ್ಶಿಸಿದ ಕೂಡಲೇ ಅವನಿಗೇನೋ ಆಯಿತು ಗೋವಿಂದ ಇನ್ನೂ ಸಿದ್ಧಾರ್ಥನ ವಿಚಿತ್ರ ಮಾತುಗಳನ್ನು ತನ್ನ ಮನಸಿನಲ್ಲಿ ತಿಕ್ಕಿ ತಿಕ್ಕಿ ತೂಗುತಿದ್ದಾಗಲೇ ಅವನ ಮೇಲೆ ಆ ಪರಿಣಾಮವಾಯಿತು

ಈಗ ಅವನಿಗೆ ಸಿದ್ಧಾರ್ಥನ ಮುಖವೇ ಕಾಣಿಸಲಿಲ್ಲ. ಅದರ ಬದಲು ಬೇರೆ, ಅನೇಕ, ನೂರಾರು, ಸಾವಿರಾರು ಮೋರೆಗಳ ಪ್ರವಾಹವನ್ನೇ

ನೋಡಿದ. ಎಲ್ಲವೂ ಒಂದೊಂದಾಗಿ ಒಂದು ಮಾಯವಾದುವು. ಹಾಗಿದ್ದರೂ ಎಲ್ಲಾ ಅಲ್ಲೇ ಸ್ಥಿರವಾಗಿ ನೆಲೆಸಿದಂತೆಯೂ ತೋರಿದುವು. ಎಲ್ಲ ಕ್ಷಣಕ್ಷಣಕ್ಕೆ ಬದಲಾಗಿ, ಹೊಸ ಸ್ವರೂಪ ಧರಿಸಿದುವು. ಕೊನೆಗೆ ಎಲ್ಲ ಸಿದ್ಧಾರ್ಥನೇ! ಮತ್ಸ್ಯದ ಮುಖ, ಈಗ ತಾನೇ ಜನಿಸಿದ ಶಿಶುವಿನ ಮೊಗಗಳನ್ನು ಕಂಡ. ಕೊಲೆಪಾತಕಿಯೊಬ್ಬ ಕಾಣಿಸಿದ. ಅವನು ತನ್ನ ಚೂರಿಯಿಂದ ಮತ್ತೊಬ್ಬನನ್ನು ತಿವಿದ. ಅವನನ್ನು ಕೈ ಕಾಲು ಕಟ್ಟಿ ಅದೇ ಕ್ಷಣ ಶಿರಚ್ಛೇದನ ಕೂಡಾ ಮಾಡಲಾಯಿತು. ಕಾಮಾತುರ ಹಾಗು ರತ್ಯಾಸಕ್ತ ಆಸನಗಳಲ್ಲಿರುವ ಸ್ತ್ರೀ ಪುರುಷರ ನಗ್ನ ದೇಹಗಳನ್ನು ಕಂಡ ತಣ್ಣಗಾದ ಶವಗಳೂ ಬಿದ್ದಿದ್ದುವು. ಪಶು, ಪಕ್ಷಿ, ಮತ್ಸ್ಯ, ಕೂರ್ಮ, ವರಾಹ, ಸಿಂಹ, ಆನೆ, ಎತ್ತುಗಳ ತಲೆಗಳನ್ನು ದಿಟ್ಟಿಸಿದ. ಅಗ್ನಿ ಕೃಷ್ಣರೂ ಪ್ರತ್ಯಕ್ಷರಾದರು.

ಈ ಎಲ್ಲ ಜೀವ ಜಂತುಗಳೊಳಗಿನ ಸಂಬಂಧ, ಬಾಂಧವ್ಯಗಳೂ ಸಾವಿರಾರು ರೀತಿ. ಒಮ್ಮೆ ಪರಸ್ಪರ ಸಹಕರಿಸುತ್ತವೆ; ದ್ವೇಷಿಸುತ್ತವೆ, ಸಂಹಾರ ಕಾರ್ಯದಲ್ಲಿ ತೊಡಗುತ್ತವೆ; ಮತ್ತು ಕೊನೆಗೆ ಪುನರ್ಜನ್ಮ ಧರಿಸುತ್ತವೆ. ಪ್ರತಿಯೊಂದಕ್ಕೂ ಮರಣವಿದೆ. ಎಲ್ಲವೂ ಅಸ್ಥಿರವೆಂಬುದಕ್ಕೆ ಈ ಸಂಕಟದ ಉದಾಹರಣೆಯೊಂದೇ ಸಾಕು. ಹಾಗಿದ್ದರೂ ಯಾವುದೂ ಸತ್ತಿಲ್ಲ. ಬದಲಾಗಿವೆ ಅಷ್ಟೆ. ಪುನಃ ಪುನಃ ಪುನರ್ಜನ್ಮ ಹೊಂದಿವೆ. ಹೊಸ ಹೊಸ ರೂಪಧರಿಸಿವೆ. ಒಂದು ಸ್ವರೂಪಕ್ಕೂ ಇನ್ನೊಂದಕ್ಕೂ ಕಾಲದ ಅಂತರವಿದೆ. ಅಷ್ಟೆ.

ಮತ್ತೆ ಈ ಎಲ್ಲ ದೇಹಗಳೂ ರೂಪಗಳೂ ಸ್ವಲ್ಪಹೊತ್ತು ಕಾಣಿಸಿ, ಮುಂದೆ ಹರಿದು, ಪುನಃ ತಲೆ ಎತ್ತಿ, ಈಸಿ, ಕೊನೆಗೆ ಒಂದರೊಳಗೊಂದು ತಾದ್ಯಾತ್ಮ ಹೊಂದಿದುವು. ಅವುಗಳ ಮೇಲೆ ಏನೋ ಒಂದು ತೆಳು, ತೆಳು ಗಾಜಿನಂತೆ ಅಥವಾ ಹಿಮದಂತೆ, ಪಾರದರ್ಶಕ ಚರ್ಮದಂತೆ, ಪರೆಯಂತೆ, ನೀರಿನ ಪರೆಯಂತೆ ಸುತ್ತಿಕೊಂಡಿದೆ. ಈ ಮುಸುಕು ಸಿದ್ಧಾರ್ಥನ ಮೋರೆಯೆಂದು ಗೋವಿಂದ ಕಂಡುಕೊಂಡ.

ಈ ಮುಖವಾಡದ ನಗು, ಜೀವೈಕ್ಯದ ನಗು, ಜನನ ಮರಣಗಳ ಏಕ ಕಾಲದ ನಗು, ಈ ಸಿದ್ಧಾರ್ಥನ ನಗು, ತಾನು ಆಶ್ಚರ್ಯದಿಂದ ನೂರಾರು ಬಾರಿ ಕಂಡ ಶಾಂತ, ಕೋಮಲ, ಅಭೇದ್ಯ ಕೃಪಾ, ಅಪಹಾಸ್ಯಗಳ ಹಾಗೂ

ಜ್ಞಾನಪೂರ್ಣ ಗೌತಮ ಬುದ್ಧನ ನಗುವಿನಂತೆಯೇ ಇವೆ ಎಂದು ಗೋವಿಂದ ಕಂಡ. ಆ ಪುರುಷೋತ್ತಮನ ನಗುವಿನಂತೆಯೇ ಇದೆ!

ಕಾಲದ ಪರಿವೆಯಿಲ್ಲದೆ, ಈ ವಿರಾಟ ಸ್ವರೂಪ ದರ್ಶನಕ್ಕೆ ಒಂದು ಕ್ಷಣ ಅಥವಾ ನೂರು ವರುಷ ಹಿಡಿಯಿತೋ ಎಂದು ಲೆಕ್ಕಿಸದೆ, ಸಿದ್ಧಾರ್ಥ ಅಥವಾ ಗೌತಮ, ತಾನು ಹಾಗೂ ಇನ್ನಿತರರು ಜೀವಂತ ಇರುವರೋ ಇಲ್ಲವೋ ಎಂಬುವನ್ನು ಗಣಿಸದೆ, ದೈವೀ ಬಾಣ ತಾಗಿದ ಆನಂದದಿಂದ ಗೋವಿಂದ ಸಿದ್ಧಾರ್ಥನ ಆ ಹಣೆಯನ್ನು ಮುಟ್ಟುತ್ತ ನಿಂತ. ಸಾವಿರಾರು ಸ್ವರೂಪಗಳು ಆ ಕನ್ನಡಿಯಲ್ಲಿ ತೋರಿ ಮಾಯವಾಗಿದ್ದರೂ ಸಿದ್ಧಾರ್ಥನ ಮೋರೆಯ ಮೇಲಿನ ಪ್ರಕಾಶವೇನೂ ಬದಲಾಗಲಿಲ್ಲ. ಗೌತಮನಂತೆಯೇ ಅವನೂ ಶಾಂತ, ಮಧುರ, ಕೃಪಾಕಟಾಕ್ಷದಿಂದ ನಗು ಬೀರಿದ.

ಗೋವಿಂದ ನಮಸ್ಕರಿಸಿದ. ಅವನ ಕಣ್ಣುಗಳಿಂದ ಅಶ್ರುಧಾರೆ ಪ್ರವಹಿಸಿತು. ಅತ್ಯಂತ ಪ್ರೇಮಾದರದಿಂದ ತನು ಪುಲಕಿತವಾಯಿತು. ಆತನ ನಗು, ತನ್ನ ಜೀವನದಲ್ಲಿ ತಾನು ಪ್ರೀತಿಸಿದ, ಅಮೂಲ್ಯವೆಂದು ಗಣಿಸಿದ, ಪವಿತ್ರವೆಂದು ಭಾವಿಸಿದ, ಸರ್ವಸ್ವದ ಸವಿಸ್ಮರಣೆ ತಂದುದರಿಂದ ಆ ಅಚಲ ರೂಪಿಯ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿದ.

ಓಂ ಶಾಂತಿಃ



# ಸಿರಿಗನ್ನಡ ಮಹಾಭಾರತ

( ವಚನ )

ಲೇಖಕರು : **ಎಂ. ಹರಿದಾಸರಾಯ**

ಬೆಲೆ : **ಮೂರು ರೂಪಾಯಿ**

—(ಹದಿನೆಂಟೂ ಪರ್ವಗಳೂ ಇವೆ) —

ಭಾರತೀಯರ ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳಲ್ಲೆಲ್ಲ "**ಭಾರತವು**" ಮುಖ್ಯ. ಮತ್ತು ಆದರಣೀಯ ಮಹಾಕಾವ್ಯವಾಗಿದೆ. ಅದನ್ನು ಪಂಚಮ ವೇದವೆಂದೂ ಕರೆಯುವರು. ವೇದಗಳನ್ನು ವಿಂಗಡಿಸಿದ ವ್ಯಾಸನೇ ಭಾರತದ ಮೂಲಕವಿ.

"**ಮಹಾಭಾರತ**"ವು ಅಂದಿನ ದೊಡ್ಡ ಯುದ್ಧದ ಕಥೆಯಾಗಿದೆ. ಆದರೆ ಅದರಲ್ಲಿ ಧರ್ಮ, ನೀತಿಗಳಿವೆ. ಯೋಗಿಗಳ, ತ್ಯಾಗಿಗಳ, ವೀರರ, ರಾಕ್ಷಸ ವೃತ್ತಿಯ, ಉಗ್ರ ಜನರ ಕಥೆ, ಕಥಾನಕಗಳು ಇವೆ. ಭಾವ, ರಸ, ಪಾತ್ರ ವೈವಿಧ್ಯಗಳಿಂದ ಅದು ಅಮೋಘ ಹಾಗೂ ಅದ್ವಿತೀಯ ಗ್ರಂಥ.

ಆದಿ ಭಾರತಕ್ಕೂ ಪ್ರಚಲಿತ ಭಾರತಕ್ಕೂ ಮಹದಂತರವಿದೆ. ವಿವಾದಾತ್ಮಕ ಹಾಗೂ ಅಲ್ಲಸಲ್ಲದ ಅನೇಕ ವಿಷಯಗಳು ಪ್ರಚಲಿತ ಭಾರತದಲ್ಲಿ ಸೇರಿಕೊಂಡಿವೆ. ಜೈನ, ಬುದ್ಧ, ಬ್ರಾಹ್ಮಣ ಮುನಿಗಳೂ ಕವಿಗಳೂ ತಂತಮ್ಮ ಧರ್ಮಬುದ್ಧಿಯಿಂದ ಅನೇಕ ವಿಷಯಗಳನ್ನು ಕೂಡಿಸಿ ಬರೆದುದೇ ಅದಕ್ಕೆ ಕಾರಣವಾಗಿದೆ. ಆದುದರಿಂದ ದೇಶೀ ಹಾಗೂ ವಿದೇಶೀ ಪಂಡಿತರು ಅದರ ಬಗ್ಗೆ ಬಹಳ ಸಂಶೋಧನೆ ವಿಮರ್ಶೆಗಳನ್ನು ಮಾಡಿರುವರು.

ಈ "**ಸಿರಿಗನ್ನಡ ಮಹಾಭಾರತ**" ದಲ್ಲಿ ಅಂತಹ ಅನೇಕ ಹೊಸ ವಿಷಯಗಳಾಗಿವೆ. ಇದರಲ್ಲಿ ಹದಿನೆಂಟು ಪರ್ವಗಳೂ ಇವೆ. ಮುಖ್ಯ ಕಥೆಯನ್ನಷ್ಟೇ ನಿರೂಪಿಸಲಾಗಿದೆ. ಅನವಶ್ಯ ವಿಷಯಗಳಿಲ್ಲ. ಸುಲಭವಾದ ಶೈಲಿ. ಆದುದರಿಂದ ಆಬಾಲ ಸ್ತ್ರೀಪುರುಷರೆಲ್ಲರಿಗೂ ಇದು ಅರ್ಥವಾಗುವಂತಿದೆ. ಶಾಲಾ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಓದಲನುಕೂಲವಾಗುವಂತೆ ಕೂಡಾ ಎಚ್ಚರಿಕೆಯಿಂದ ಬರೆಯಲಾಗಿದೆ.

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಸಂಪಾದಕರು ಮತ್ತು ಪ್ರಕಾಶಕರು:- **ಎಂ. ಹರಿದಾಸರಾಯ**

ಈ ಗ್ರಂಥಮಾಲೆಯು ೧೯೪೮ ನೇ ಆಗಸ್ಟ್, ೧೫ನೇ ತಾರೀಖಿನ ಶುಭ ದಿನ ಆರಂಭವಾಗಿದೆ. ಮತ್ತು ಅಂದಿನಿಂದ ತಪ್ಪದೇ ನಡೆಯುತ್ತ ಬಂದಿದೆ.

ಪ್ರತಿ ವರುಷದ ಆಗಸ್ಟ್, ನವಂಬರ್, ಫೆಬ್ರುವರಿ ಮತ್ತು ಮೇ ತಿಂಗಳಲ್ಲಿ ಹೀಗೆ ಮೂರು ತಿಂಗಳಿಗೊಂದರಂತೆ ಒಟ್ಟು ವರುಷಕ್ಕೆ ನಾಲ್ಕು ಗ್ರಂಥಗಳು ಅರಳುತ್ತವೆ

ಈ ಗ್ರಂಥಮಾಲೆಯಲ್ಲಿ ಕತೆಗಳು, ಕಾದಂಬರಿಗಳು, ನಾಟಕಗಳು, ರಾಜಕೀಯ ಮತ್ತು ಆಧ್ಯಾತ್ಮಿಕ ಗ್ರಂಥಗಳು ಮೊದಲಾದವುಗಳನ್ನು ಪ್ರಕಟಿಸಲಾಗುತ್ತದೆ.

ವರುಷದ ಯಾವುದೇ ಸಮಯದಲ್ಲಿ ಗ್ರಂಥದ ಚಂದಾದಾರರಾಗಬಹುದು. ಅವರಿಗೆ ಆ ವರುಷದ ಆರಂಭದಿಂದ ಪ್ರಕಟಿಸಿದ ಎಲ್ಲ ಗ್ರಂಥಗಳನ್ನು ಕೊಡಲಾಗುವದು.

೧. **ವಾರ್ಷಿಕ ಚಂದಾ ರೂ. ೫** (ಅಂಚೆವೆಚ್ಚ ಕೂಡಿ)
೨. **ಪೋಷಕರು ರೂ. ೧೦** (ಅವರಿಗೆ ಮೂರು ವರುಷ ಗ್ರಂಥಗಳು)
೩. **ಹಿತಚಿಂತಕರು ರೂ. ೨೫** (ಅವರಿಗೆ ಏಳು ವರುಷ ಗ್ರಂಥಗಳು)
೪. **ಆಶ್ರಯದಾತರು ರೂ. ೫೦** (ಹದಿಮೂರು ವರುಷ ಗ್ರಂಥಗಳು)
೫. **ಆಜೀವ ಸದಸ್ಯರು ರೂ. ೧೦೦** (ಸದಾಕಾಲ ಗ್ರಂಥಗಳು)

---

Editor and Publisher:- ***M. Haridasrao***

Sarvodaya Sahityamala, Hubli